೩೬೬

# ವೃದ್ಧರು ಮತ್ತು ಅವರ ರಕ್ಷಣೆ

ಎಚ್. ವಿ. ನಾಗೇಶ್



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಫೆಬ್ರುವರಿ, ೧೯೮೬

ಉಪನ್ಯಾಸ ಗ್ರಂಥಮಾಲೆ

೩೬೬

# ವೃದ್ಧರು ಮತ್ತು ಅವರ ರಕ್ಷಣೆ

ಶ್ರೀ ಎಚ್. ವಿ. ನಾಗೇಶ್







ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಫೆಬ್ರುವರಿ, ೧೯೭೬

ಪ್ರಕಾಶಕರು :

**ಎಸ್. ಬಿ. ನಾಯಕ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಫೆಬ್ರುವರಿ, ೧೯೮೬



ಬೆಲೆ : ೫೦ ಪೈಸೆ

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್
ತಡಕೋಡ ಗಲ್ಲಿ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ. ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ,

ಈ ಮಾಲೆಯಲ್ಲಿ ಈಗಾಗಲೇ ೩೬೫ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇ ಪುಸ್ತಿಕೆಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮು ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಎಸ್. ಜಿ. ದೇಸಾ**
ಕುಲಪತಿ

# ಕೃತಜ್ಞತೆಗಳು

ಇದು ನಾನು ಬನಹಟ್ಟಿಯಲ್ಲಿ ಕರ್ನಾಟಕ ವಿಶ್ವವಿದ್ಯಾ-
ಲಯದ ಪ್ರಸಾರಾಂಗವು ಏರ್ಪಡಿಸಿದ ಉಪನ್ಯಾಸ ಶಿಬಿರದಲ್ಲಿ
ಮಾಡಿದ ಉಪನ್ಯಾಸದ ಸಾರ. ನಾನು ಈ ಉಪನ್ಯಾಸದಿಂದ
ಸಂತೋಷಪಟ್ಟಿದ್ದೇನೆ. ಈಗ ಪ್ರಸಾರಾಂಗವು ಇದನ್ನು ಪುಸ್ತಿ
ಕೆಯ ರೂಪದಲ್ಲಿ ಪ್ರಕಟಿಸುತ್ತಿರುವುದು ಮತ್ತಿಷ್ಟು ಸಂತೋಷದ
ಸಂಗತಿ. ಈ ಉಪಕಾರಕ್ಕಾಗಿ ನಾನು ಪ್ರಸಾರಾಂಗದ ನಿರ್ದೇ
ಶಕರಾದ ಶ್ರೀ ಎಸ್. ಬಿ. ನಾಯಕ ಮತ್ತು ಇತರ ಅಧಿಕಾರಿ
ಗಳಿಗೆ ಋಣಿಯಾಗಿದ್ದೇನೆ.

ಜೆ. ಎಸ್. ಎಸ್. ಕಾಲೇಜು
ಧಾರವಾಡ-೪

**ಎಚ್. ವಿ. ನಾಗೇಶ್**

# ಪರಿವಿಡಿ

ಅಧ್ಯಾಯ ೧

# ವೃದ್ಧರು ಮತ್ತು ಅವರ ಸಮಸ್ಯೆಗಳು

ಇತ್ತೀಚೆಗೆ, ಅಂದರೆ ೧೯೮೨ರಲ್ಲಿ, ವಿಶ್ವದಾದ್ಯಂತ ವೃದ್ಧರ ವರ್ಷವನ್ನು ಆಚರಿಸಲಾಯಿತು. ವೃದ್ಧರ ಸಮಸ್ಯೆಗಳೇನು ಎಂಬುದನ್ನು ತಿಳಿದುಕೊಂಡು, ಅವರಿಗೆ ಬೇಕಾದ ಸಹಾಯ ವನ್ನು ಕೊಡಬೇಕು ಎಂಬುದನ್ನು ಎಲ್ಲ ಜನರಿಗೆ ಮನವರಿಕೆ ಮಾಡುವಂತೆ ವಿಶ್ವಸಂಸ್ಥೆ ಕರೆಕೊಟ್ಟಿತು. ಎಲ್ಲ ದೇಶಗಳಂತೆ ಭಾರತವೂ ೧೯೮೨ರಲ್ಲಿ ಜಾಗತಿಕ ವೃದ್ಧರ ವರ್ಷವನ್ನು ಆಚರಿಸಿ ವೃದ್ಧರಿಗೆ ತನ್ನ ಗೌರವವನ್ನು ಸಲ್ಲಿಸಿದೆ. ಹಾಗೆ ನೋಡಿದರೆ, ಭಾರತವು ಎಂದಿನಿಂದಲೂ ಗುರು-ಹಿರಿಯರನ್ನು ಗೌರವದಿಂದ ಕಾಣುತ್ತಲೇ ಬಂದಿದೆ. ವೃದ್ಧರು ಪೂಜಾರ್ಹರು ಎಂಬುದು ನಮ್ಮ ಪರಂಪರೆ. ಆದರೂ ಇತರ ದೇಶಗಳಲ್ಲಿ ಆದಂತೆ ನಮ್ಮ ಲ್ಲಿಯೂ ಹಲವು ಬದಲಾವಣೆಗಳು ಉಂಟಾಗಿವೆ. ಬಹುತೇಕ ದೇಶಗಳಲ್ಲಿ ವೃದ್ಧರ ಬದುಕು ಈಗ ಹಿಂದಿನಂತೆ ಸುಖಮಯ ವಾಗಿಲ್ಲ. ಹೀಗೆ ಏಕಾಯಿತು ಮತ್ತು ಇದಕ್ಕೇನು ಪರಿಹಾರ ಎಂಬುದೇ ಈ ಉಪನ್ಯಾಸದ ವಸ್ತು.

ಜಗತ್ತಿನಲ್ಲಿ ಈಗ ವೃದ್ಧರ ಸಂಖ್ಯೆ ಏರುತ್ತಿದೆ. ವಿಶ್ವ ಸಂಸ್ಥೆಯ ಅಂದಾಜಿನ ಪ್ರಕಾರ ೧೯೮೦ ರಲ್ಲಿ ಜಗತ್ತಿನ ಜನ ಸಂಖ್ಯೆಯಲ್ಲಿ ನೂರರಲ್ಲಿ ಆರು ಮಂದಿ ೬೫ ವರ್ಷ ತುಂಬಿದ ಮುದುಕರಿದ್ದರು. ಇಂಥವರ ಒಟ್ಟು ಸಂಖ್ಯೆ ಸುಮಾರು ೨೬ ಕೋಟಿ. ಕ್ರಿ. ಶ. ೨೦೦೦ದ ಹೊತ್ತಿಗೆ ಈ ಸಂಖ್ಯೆ ೪೦ ಕೋಟಿಯನ್ನು ದಾಟಬಹುದು.

ಪಶ್ಚಿಮದ ಅನೇಕ ದೇಶಗಳಲ್ಲಿ ಅಲ್ಲಿಯ ಜನಸಂಖ್ಯೆಯಲ್ಲಿ
ನೂರಕ್ಕೆ ಹತ್ತು—ಹದಿನೈದರಷ್ಟು ಜನರು ೬೦ ವರ್ಷ ತುಂಬಿದ
ಮುದುಕರಿದ್ದಾರೆ. ಅವರಲ್ಲಿ ಬಹುಪಾಲು ಜನರಿಗೆ ದುಡಿದು
ಉಣ್ಣುವುದು ಸಾಧ್ಯವಿಲ್ಲ. ಅಂತಹವರು ಬೇರೆಯವರನ್ನು ಆಶ್ರ
ಯಿಸಿಕೊಂಡಿರಬೇಕಾಗುತ್ತದೆ. ಹಿಂದಿನ ಕಾಲದಂತೆ ಈಗ
ಕುಟುಂಬಗಳು ಅವರಿಗೆ ಸಹಾಯ ಮಾಡುವುದು ಕಷ್ಟವಾಗಿದೆ
ಹೀಗಾಗಿ ಈ ಮುದುಕರು ಕಷ್ಟಪಡುತ್ತಿದ್ದಾರೆ. ಅವರಿ
ಸಹಾಯ ಬೇಕು. ಇದನ್ನು ನೆನಪು ಮಾಡಿ ಕೊಡಲು ವೃದ್ಧ
ವರ್ಷವನ್ನು ಆಚರಿಸಬೇಕಾಯಿತು.

## ವೃದ್ಧರು ಯಾರು ?

ವೃದ್ಧರು ಯಾರು ? ಯಾರನ್ನು ಮುದುಕರೆಂದು ಕ
ಯಬಹುದು ? ಮುಪ್ಪು ಪ್ರಾರಂಭವಾಗುವುದು ಯಾವಾಗ
ನಲವತ್ತೈದು ವರ್ಷ ವಯಸ್ಸಿನಲ್ಲೇ ? ಐವತ್ತು ವರ್ಷಕ್ಕೇ
ಐವತ್ತೈದು ವರ್ಷಕ್ಕೇ ? ಅರುವತ್ತು ಅಥವಾ ಅರುವತ್ತೈ
ವರ್ಷ ಪ್ರಾಯದಲ್ಲೇ ? ಇಂಥ ಪ್ರಶ್ನೆಗಳಿಗೆ ಉತ್ತರ ಹೇ
ವುದು ಕಷ್ಟ. ಕೆಲವರು ಬೇಗ ಮುದುಕರಾಗುತ್ತಾರೆ. ಅಂಥ
ರಲ್ಲಿ ೪೫ ಅಥವಾ ೫೦ ವಯಸ್ಸಿಗೆ ಮುಪ್ಪಿನ ಲಕ್ಷಣಗಳುಕಾಣ
ಕೊಳ್ಳುತ್ತವೆ. ಮತ್ತು ಕೆಲದರು ೬೫ ಅಥವಾ ೭೦ವರ್ಷ ಪ್ರಾ
ದಲ್ಲೂ ಗಟ್ಟಿಮುಟ್ಟಾಗಿರುತ್ತಾರೆ. ಹೀಗೆ ನಮ್ಮ ಪ್ರಾಯ
ಮೇಲಿಂದ ಮುಪ್ಪಿನ ಗೆರೆ ಕೊರೆಯುವುದು ಸಾಧ್ಯವಿಲ್ಲ. ಆದರ
ನಮ್ಮಲ್ಲಿ ಹಿಂದೆ ಅರುವತ್ತು ವರ್ಷವಾದರೆ ಒಂದು ಹಂತವ
ತಲುಪಿದಂತೆ ಎಂಬ ಭಾವನೆ ಇತ್ತು. ಹಿಂದೂಗಳು ಅರುವ
ಸಂವತ್ಸರಗಳನ್ನು ಎಣಿಸುತ್ತಾರೆ. ಈ ಅರುವತ್ತು ಸಂವತ

ಗಳು ಮುಗಿದ ಮೇಲೆ ಇನ್ನೊಮ್ಮೆ ಅವೇ ಸಂವತ್ಸರಗಳನ್ನು ಮತ್ತೆ ಎಣಿಸುತ್ತಾರೆ. ಅರುವತ್ತು ವರ್ಷ ತುಂಬಿದ ಮೇಲೆ ಶಾಂತಿ ಮಾಡುವುದು ಮತ್ತು ಸಮಾರಂಭಗಳನ್ನು ಏರ್ಪಡಿಸುವುದು ರೂಢಿಯಲ್ಲಿದೆ. ಅರುವತ್ತು ವರ್ಷವಾದ ಮೇಲೆ ಅನಿಷ್ಟಗಳು ಬರಬಹುದೆಂದು ಹೆದರುತ್ತಾರೆ. ಹಾಗೆಯೇ ಅರುವತ್ತರ ನಂತರ ಮನುಷ್ಯನ ಬುದ್ಧಿಶಕ್ತಿ ಕಡಿಮೆಯಾಗುತ್ತದೆ ಎಂಬ ಕಲ್ಪನೆಯೂ ಇದೆ. ಅರುವತ್ತಕ್ಕೆ ಅರಳು ಮರಳು ಎಂಬ ಗಾದೆ ಇದೇ ಮಾತನ್ನು ಹೇಳುತ್ತದೆ.

ಈ ಮಾತು ನಿಜವೆ ? ೫೦—೬೦ ವರ್ಷ ಪ್ರಾಯವಾಗುತ್ತಲೇ ಮನುಷ್ಯರು ನಿರುಪಯೋಗಿ ಆಗುತ್ತಾರೆ ಎಂಬ ಮಾತು ಸತ್ಯವೇ ? ಅವರು ನಿವೃತ್ತಿ ಹೊಂದಲೇ ಬೇಕೆ ? ಅವರ ಮಾನಸಿಕ ಶಕ್ತಿ ಕಡಿಮೆಯಾಗುತ್ತದೆಯೇ ? ಈ ಪ್ರಶ್ನೆಗಳ ಬಗ್ಗೆ ವಿಜ್ಞಾನಿಗಳ ಸಾಮಾನ್ಯ ಅಭಿಪ್ರಾಯವೆಂದರೆ ಬಹುತೇಕ ಮುದುಕರು ೬೦-೭೦ ವರ್ಷ ಪ್ರಾಯದವರೆಗೆ ಎಂದಿನಂತೆಯೇ ದುಡಿಯಬಹುದು. ಅವರ ಮಾನಸಿಕ ಶಕ್ತಿ ಕುಗ್ಗುವುದಿಲ್ಲ. ಅವರು ಹೊಸ ವಿಷಯಗಳನ್ನು ಕಲಿಯಬಲ್ಲರು. ಎಲ್ಲರಂತೆ ಸ್ಪಷ್ಟವಾಗಿ ವಿಚಾರ ಮಾಡಬಲ್ಲರು. ಯೋಗ್ಯ ವಾತಾವರಣದಲ್ಲಿ ಇದ್ದರೆ ಅವರು ಎಲ್ಲರಂತೆ ಸಾಮಾನ್ಯ ರೀತಿಯಲ್ಲಿ ಜೀವನ ಸಾಗಿಬಲ್ಲರು.

ಹಾಗಾದರೆ ಅವರು ನಿವೃತ್ತಿಯಾಗುವುದು ಬೇಡವೆ ? ಯಾವ ವಯಸ್ಸಿನಲ್ಲಿ ನಿವೃತ್ತಿಯಾಗಬೇಕು ? ಈ ಪ್ರಶ್ನೆಗಳಿಗೆ ಒಂದು ಸಾಮಾನ್ಯವಾದ ಉತ್ತರವಿಲ್ಲ. ನಮಗೆ ಗೊತ್ತಿರುವಂತೆ

ಸರಕಾರಿ ನೌಕರರು, ಸಾರ್ವಜನಿಕ ಸಂಸ್ಥೆಗಳಲ್ಲಿ ದುಡಿಯುವ ಕೆಲಸಗಾರರು, ಕಾರ್ಖಾನೆಗಳಲ್ಲಿ ಕೆಲಸ ಮಾಡುವ ನೌಕರರು ಯಾವುದಾದರೂ ಒಂದು ನಿಗದಿಪಡಿಸಿದ ವಯಸ್ಸಿಗೆ ನಿವೃತ್ತಿ ಪಡೆಯುತ್ತಾರೆ. ಆದರೆ ಇಲ್ಲಿಯೂ ಒಂದೇ ನಿಯಮವಿಲ್ಲ. ಉದಾಹರಣೆಗೆ ಕೇಂದ್ರ ಸರಕಾರದ ನೌಕರರು ೫೮ನೇ ವಯಸ್ಸಿಗೆ ನಿವೃತ್ತರಾಗುತ್ತಾರೆ. ಕರ್ನಾಟಕ ಸರಕಾರದ ನೌಕರರು ೫೫ನೇ ವಯಸ್ಸಿಗೆ ನಿವೃತ್ತರಾಗುತ್ತಾರೆ. ಇತ್ತೀಚೆಗೆ ನಿವೃತ್ತಿಯ ವಯಸ್ಸನ್ನು ೫೮ಕ್ಕೆ ಏರಿಸಿದ್ದಾರೆ. ಹೈಕೋರ್ಟಿನ ನ್ಯಾಯಾಧೀಶರು ೬೨ ವರ್ಷ ಪ್ರಾಯದವರೆಗೆ ಕೆಲಸ ಮಾಡಬಹುದು. ಇತರ ನೌಕರರು ೫೫ ಅಥವಾ ೫೮ ಅಥವಾ ೬೦ ವರ್ಷಕ್ಕೆ ನಿವೃತ್ತರಾಗುತ್ತಾರೆ. ಕೆಲವರಿಗೆ ನಿವೃತ್ತಿಯ ವಯಸ್ಸು ಎಂಬುದೇ ಇಲ್ಲ. ಉದಾಹರಣೆಗೆ ಖಾಸಗಿಯಾಗಿ ದುಡಿಯುವ ವಕೀಲರು, ವೈದ್ಯರು, ವ್ಯಾಪಾರಿಗಳು, ಪುರೋಹಿತರು, ಲೆಕ್ಕ ತಪಾಸು ಮಾಡುವವರು ಇವರೆಲ್ಲ ತಾವು ಇನ್ನು ದುಡಿಯುವುದು ಸಾಕು ಎನ್ನುವ ತನಕ ಕೆಲಸ ಮಾಡುತ್ತಾರೆ. ಅದೇ ರೀತಿಯಲ್ಲಿ ಹಳ್ಳಿಯಲ್ಲಿರುವ ಬೇಸಾಯಗಾರರಿಗೂ ನಿವೃತ್ತಿ ಎಂಬುದೇ ಇಲ್ಲ. ಅವರು ಹಣ್ಣು ಹಣ್ಣು ಮುದುಕರಾದರೂ ದುಡಿಯುವುದನ್ನು ನೋಡಬಹುದು. ಹಾಗೆಯೇ ಹಳ್ಳಿಯ ನೇಕಾರರು, ಕುಂಬಾರರು, ಕಮ್ಮಾರರು, ಹೊಲಗದ್ದೆಗಳಲ್ಲಿ ದುಡಿಯುವ ಕೂಲಿ ಕೆಲಸದವರು ತಮ್ಮ ದೇಹದಲ್ಲಿ ಕಸುವು ಇರುವತನಕ ದುಡಿಯುತ್ತಾರೆ. ಮನೆಗೆಲಸವನ್ನು ಮಾಡಿಕೊಂಡಿರುವ ಹೆಣ್ಣು ಮಕ್ಕಳು ಕೆಲಸ ನಿಲ್ಲಿಸುವುದು ತಮ್ಮ ಸೊಂಟಬಿದ್ದಾಗಲೇ.

ಹೀಗೆ ಯಾರು ವೃದ್ಧರು, ಅವರು ಯಾವಾಗ ನಿವೃತ್ತಿ

ಹೊಂದಬೇಕು ಎಂಬುದನ್ನು ಆಯಾಯಾ ಸಮಾಜಗಳು ಮತ್ತು ಸರಕಾರಗಳು ನಿರ್ಧರಿಸುತ್ತವೆ. ಯುರೋಪಿನ ಜನರು ನಮಗಿಂತ ಹೆಚ್ಚು ಕಾಲ ಬದುಕುತ್ತಾರೆ. ಹಾಗೂ ಹೆಚ್ಚು ಕಾಲ ದುಡಿಯುತ್ತಾರೆ. ಯುರೋಪಿನ ದೇಶಗಳಲ್ಲಿ ಹಾಗೂ ಅಮೇರಿಕೆಯಲ್ಲಿ ನಿವೃತ್ತಿಯ ವಯಸ್ಸು ೬೫. ಫ್ರಾನ್ಸ್ ಮತ್ತು ಸೋವಿಯತ್, ರಷ್ಯಾ ದೇಶಗಳಲ್ಲಿ ಗಂಡಸರ ನಿವೃತ್ತಿಯ ವಯಸ್ಸು ೬೦. ಸ್ತ್ರೀಯರ ನಿವೃತ್ತಿಯ ವಯಸ್ಸು ಅದಕ್ಕಿಂತ ಸ್ವಲ್ಪ ಕಡಿಮೆ, ಅಂದರೆ ೫೫. ನಮ್ಮ ದೇಶದಲ್ಲಿ ವಿವಿಧ ಬಗೆಯ ನೌಕರರು ೫೫ ರಿಂದ ೬೦ ವಯಸ್ಸಿನ ವರೆಗೆ ದುಡಿಯುತ್ತಾರೆ.

## ಪ್ರಾಚೀನ ಸಮಾಜಗಳಲ್ಲಿ ವೃದ್ಧರ ಸ್ಥಾನಮಾನ

ಪ್ರಾಚೀನ ಸಮಾಜಗಳಲ್ಲಿ ವೃದ್ಧರಿಗೆ ಬಹಳ ಗೌರವ ಸಿಗುತ್ತಿತ್ತು. ಇದಕ್ಕೆ ಅನೇಕ ಕಾರಣಗಳಿದ್ದವು. ಆಗಿನ ಕಾಲದಲ್ಲಿ ರೋಗರುಜಿನಗಳಿಗೆ ತುತ್ತಾಗದೇ ಬಹಳ ದಿನಗಳ ಕಾಲ ಉಳಿಯುವುದು ಒಂದು ದೊಡ್ಡ ವಿಷಯ. ಒಂದು ಅದ್ಭುತವೆಂದರೂ ನಡೆದೀತು. ಹಾಗೆ ಬದುಕಿ ಉಳಿದವರು ಗಟ್ಟಿಜೀವ ಎನ್ನಿಸಿಕೊಳ್ಳುತ್ತಿದ್ದರು. ಆಗ ಜನರ ಸರಾಸರಿ ಆಯುರ್ಮಾನ ಕಡಿಮೆ ಇರುತ್ತಿತ್ತು. ಇದರಂತೆಯೇ ಮುದುಕರ ಸಂಖ್ಯೆಯೂ ಅತಿ ಕಡಿಮೆ ಇರುತ್ತಿತ್ತು. ಹೀಗೆ ಕಡಿಮೆ ಸಂಖ್ಯೆಯಲ್ಲಿರುವ ಅವರು ಯಾರಿಗೂ ಭಾರವಾಗುತ್ತಿರಲಿಲ್ಲ. ಇದಕ್ಕೆ ಕಾರಣವೆಂದರೆ ಬೇಸಾಯಗಾರರ ಕುಟುಂಬಗಳಲ್ಲಿ ಅವರು ಹಣ್ಣುಹಣ್ಣು ಮುದುಕರಾಗುವ ತನಕ ತಮ್ಮ ಕೈಲಾ

ದಷ್ಟು ಕೆಲಸ ಮಾಡಬಹುದಾಗಿತ್ತು. ಆ ಕುಟುಂಬಗಳಲ್ಲಿರುವ ಮುದುಕಿಯರು ತಮ್ಮ ಮಕ್ಕಳು, ಮೊಮ್ಮಕ್ಕಳು ಕಾಹಿಲೆ ಬಿದ್ದಾಗ ಅವರಿಗೆ ಔಷಧಿ ತಯಾರಿಸಿ ಕೊಡುತ್ತಿದ್ದರು; ರೋಗಿಗಳ ಆರೈಕೆ ಮಾಡುತ್ತಿದ್ದರು. ಓದು ಬರಹವನ್ನು ಬಲ್ಲ ಅಜ್ಜಂದಿರು ತಮ್ಮ ಮೊಮ್ಮಕ್ಕಳಿಗೆ ಅಷ್ಟು ಇಷ್ಟು ವಿದ್ಯೆ ಕಲಿಸುತ್ತಿದ್ದರು. ಏನಿಲ್ಲ ಎಂದರೂ ಈ ಮುದುಕ ಮುದುಕಿಯರು ಮನೆಯನ್ನು ಕಾಯಬಹುದಾಗಿತ್ತು ಅಥವಾ ಚಿಕ್ಕಮಕ್ಕಳನ್ನು ನೋಡಿಕೊಳ್ಳಬಹುದಾಗಿತ್ತು. ನೇಕಾರಿಕೆ, ಕುಂಬಾರತನ, ಬಡಿಗತನ, ಕಮ್ಮಾರಿಕೆ ಮುಂತಾದ ಕಸಬುಗಳನ್ನು ಮಾಡುವ ಜನರು ಬಹಳ ವಯಸ್ಸಾದರೂ ದುಡಿಯುತ್ತಲೇ ಇರುವುದು ಸಾಧ್ಯವಿತ್ತು. ಹಳ್ಳಿಯ ಕಸಬುಗಳೇ ಹಾಗೆ. ಅವುಗಳಿಗೆ ನಿವೃತ್ತಿಯ ವಯಸ್ಸು ಇಲ್ಲ. ಹೀಗೆ ಕೊನೆಯವರೆಗೂ ದುಡಿದು ಸ್ವಲ್ಪಾದರೂ ಗಳಿಸುತ್ತಿದ್ದ ವೃದ್ಧರಿಗೆ ಕುಟುಂಬವು ಮರ್ಯಾದೆಯನ್ನು ಕೊಡುವುದು ಸಹಜ.

ಇನ್ನೊಂದು ಕಾರಣಕ್ಕಾಗಿಯೂ ವೃದ್ಧರಿಗೆ ಗೌರವ ಸಿಗುತ್ತಿತ್ತು. ಆ ಕಾಲದಲ್ಲಿ ಅವರ ಅನುಭವ ಎಂದರೆ ಒಂದು ದೊಡ್ಡ ಆಸ್ತಿ ಇದ್ದಹಾಗೆ. ಹಿಂದಿನ ಕಾಲದಲ್ಲಿ ಈಗಿರುವ ಹಾಗೆ ಶಿಕ್ಷಣ, ತರಬೇತಿ, ಯಂತ್ರ-ತಂತ್ರ ಇರಲಿಲ್ಲ. ವಯಸ್ಸಾದ ತಂದೆ ಅಥವಾ ಅಜ್ಜನನ್ನು ನೋಡಿ ಎಳೆಯರು ತಮ್ಮ ಕಸುಬುಗಳನ್ನು ಕಲಿತುಕೊಳ್ಳುತ್ತಿದ್ದರು. ಅನುಭವಿಯಾದ ವೈದ್ಯನು ತನ್ನ ಮಗನಿಗೆ ತಾನು ಗಳಿಸಿದ ವಿದ್ಯೆಯನ್ನು ಕೊಡುತ್ತಿದ್ದ. ಅದೇ ರೀತಿಯಲ್ಲಿ ಅನುಭವಿಗಳಾದ ಸಂಗೀತಗಾರರು, ನಟರು, ಶಿಲ್ಪಿಗಳು, ಪುರೋಹಿತರು, ಪಂಡಿತರು ತಮ್ಮ ಶಿಷ್ಯರನ್ನು

ತರಬೇತುಗೊಳಿಸುತ್ತಿದ್ದರು. ಹೀಗೆ ಕಲಿಸುವ ಗುರುಗಳೆಲ್ಲ ವಯಸ್ಸಿನಲ್ಲಿ ಹಿರಿಯರೇ ಇರುತ್ತಿದ್ದರು. ಇದರಿಂದಾಗಿ ವಯಸ್ಸಿಗೆ ಮರ್ಯಾದೆ ಸಿಗುವುದು ವಾಡಿಕೆಯಾಗಿತ್ತು.

ಪ್ರಾಚೀನ ಕಾಲದಲ್ಲಿ ವಯಸ್ಸಿಗೆ ಮರ್ಯಾದೆ ಸಿಗಲು ಇನ್ನೊಂದು ಕಾರಣವಿದೆ. ಪ್ರತಿಯೊಂದು ಕುಟುಂಬಕ್ಕೂ, ಹಾಗೂ ಪ್ರತಿಯೊಂದು ಸಮುದಾಯಕ್ಕೂ ಹಿರಿಯರ ಅಗತ್ಯ ಇರುತ್ತದೆ. ಹಿಂದಿನ ಕಾಲವಲ್ಲಿ ಲಿಖಿತ ದಾಖಲೆಗಳು ಇರಲಿಲ್ಲ. ತಮ್ಮ ಸಮುದಾಯಗಳಲ್ಲಿ ಆದ ವಾದ ವಿವಾದಗಳ ಬಗ್ಗೆ ಅಥವಾ ಕರಾರುಗಳ ಬಗ್ಗೆ ಮಾಹಿತಿ ಬೇಕಾದರೆ ಅವರು ಹಿರಿಯರನ್ನೇ ಕೇಳಬೇಕಾಗುತ್ತಿತ್ತು. ಹಿರಿಯರು ಸಮುದಾಯದ ವಾಡಿಕೆ ಸಂಪ್ರದಾಯಗಳನ್ನು ತಿಳಿದುಕೊಂಡು ಉಳಿದವರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಅದೇ ರೀತಿಯಲ್ಲಿ ಜನರ ಜಗಳಗಳನ್ನು ಬಗೆಹರಿಸಲು ಅವರು ಕಿರಿಯರಿಗಿಂತ ಹೆಚ್ಚು ಸಮರ್ಥರಾಗಿದ್ದರು. ಆದುದರಿಂದ ಹಿಂದಿನ ಕಾಲದಲ್ಲಿ ಗ್ರಾಮಗಳ ಪಂಚರು ಹೆಚ್ಚಾಗಿ ವಯೋವೃದ್ಧರೇ ಇರುತ್ತಿದ್ದರು.

ಒಟ್ಟಿನಲ್ಲಿ, ಹಿಂದೆ ಕುಟುಂಬ ಮತ್ತು ಸಮುದಾಯಗಳಲ್ಲಿ ಹಿರಿಯ ತಲೆಮಾರಿನವರಿಗೆ ಹೆಚ್ಚಿನ ಗೌರವ ಸಿಗುತ್ತಿತ್ತು.

## ಬದಲಾದ ಕಾಲ, ಬದಲಾಗುತ್ತಿರುವ ಸ್ಥಾನಮಾನ

ಕಾಲ ಬದಲಾಗಿದೆ. ಅನೇಕ ಪಾಶ್ಚಿಮಾತ್ಯ ದೇಶಗಳಲ್ಲಿ ವೃದ್ಧರು ಬಹಳ ದುಃಖವಲ್ಲಿದ್ದಾರೆ. ಅವರನ್ನು ಹೋಲಿಸಿದರೆ ನಮ್ಮ ದೇಶದಲ್ಲಿ ಪರಿಸ್ಥಿತಿಯು ಅಲ್ಲಿನಷ್ಟು ಹಾಳಾಗಿಲ್ಲ. ಆದರೂ ವೃದ್ಧರು ಹಿಂದಿನಷ್ಟು ಸುಖವಾಗಿಲ್ಲ ಅನ್ನಿಸುತ್ತದೆ.

ಈ ಕಾಲ ಯುವಕರದು, ಈಗ ತಮ್ಮನ್ನು ಯಾರೂ ಕೇಳುವವರಿಲ್ಲ ಎಂಬ ಭಾವನೆ ಅವರಿಗೆ ಬಂದಿದೆ. ಸರಕಾರವು ಅವರಿಗಾಗಿ ವೃದ್ಧರ ಮನೆಗಳನ್ನು ಕಟ್ಟಿಕೊಡುತ್ತಿದೆ; ಪಿಂಚಣಿ ಕೊಡುತ್ತಿದೆ; ಬೇರೆ ಸಹಾಯವನ್ನು ಒದಗಿಸುತ್ತಿದೆ. ಆದರೂ ಮುದುಕರಿಗೆ ಶಾಂತಿ ಸಮಾಧಾನವಿಲ್ಲ. ಅವರಿಗೆ ಬೇಕಾದ ಪ್ರೀತಿ ಗೌರವಗಳು ಸಿಗುವುದಿಲ್ಲ. ಹೀಗೆ ಪರಿಸ್ಥಿತಿ ಬದಲಾಗಲು ಕಾರಣಗಳೇನು ?

ಹಿಂದೆ ಅತೀ ವಯಸ್ಸಾದ ವೃದ್ಧರ ಸಂಖ್ಯೆ ಬಹಳ ಕಡಿಮೆ ಇರುತ್ತಿತ್ತು. ಆದರೆ ಈಗ ಪಶ್ಚಿಮದ ದೇಶಗಳಲ್ಲಿ ಜನರ ಸರಾಸರಿ ಆಯುರ್ಮಾನ ಹೆಚ್ಚಿದೆ. ಅಂದರೆ ಅವರು ಬಹಳ ದಿನ ಬದುಕಿ ಉಳಿಯುತ್ತಾರೆ. ಅಂತೆಯೇ ಮುದುಕರ ಸಂಖ್ಯೆ ಹೆಚ್ಚಿದೆ. ಅವರು ಮುದುಕರಾದರೂ ಬಹಳ ವರ್ಷಗಳ ಕಾಲ ದುಡಿಯುತ್ತಿದ್ದಾರೆ. ಆದುದರಿಂದ ಕಿರಿಯರು ತಮಗೆ ಉದ್ಯೋಗ ಅವಕಾಶಗಳು ಕಡಿಮೆಯಾಗಬಹುದು ಎಂದು ಹೆದರುತ್ತಿದ್ದಾರೆ. ತಮಗೆ ಸಿಗಬೇಕಾದ ಮೇಲಿನ ಹುದ್ದೆಗಳೂ ಒಳ್ಳೆಯ ಅವಕಾಶಗಳೂ ಸಿಗದೇ ಹೋಗುತ್ತವೆ ಎಂಬ ಭೀತಿಯೂ ಇದೆ. ಹೀಗಾಗಿ ವೃದ್ಧರ ಬಗ್ಗೆ ಕೆಲವರಿಗೆ ಹೊಟ್ಟೆ ಕಿಚ್ಚು, ಕೆಲವರಿಗೆ ತಾತ್ಸಾರ.

ಇನ್ನೊಂದು ಕಾರಣವೆಂದರೆ. ಮುದುಕರಿಗೆ ಎ[illegible] ರೀತಿಯ ಆಶ್ರಯ ಮತ್ತು ಆರೈಕೆಗಳನ್ನು ಕೊಡುತ್ತಿದ್ದ ಅವಿಭಕ್ತ ಕುಟುಂಬಗಳು ಈಗ ಮಾಯವಾಗುತ್ತಿವೆ. ಪ್ರಾಯಕ್ಕೆ ಬಂದ ಗಂಡು ಮಕ್ಕಳು ನೌಕರಿಗಾಗಿ ವ್ಯಾಪಾರ ಉದ್ದಿಮೆ ಎಂಬ ಕಾರಣಗಳಿಗಾಗಿ, ಮನೆಯಿಂ

ದೂರ ಹೋಗಿ ಅಲ್ಲಿ ತಮ್ಮ ಹೆಂಡಿರು ಮಕ್ಕಳೊಡನೆ ಬೇರೆ ಮನೆ ಮಾಡುತ್ತಾರೆ. ಹಳ್ಳಿಯ ಮನೆಯಲ್ಲಿ ವಯಸ್ಸಾದ ತಂದೆ ತಾಯಿ ಅಥವಾ ಅಜ್ಜ-ಅಜ್ಜಿ ಇವರು ಮಾತ್ರ ಉಳಿದುಕೊಂಡು ಹಾಗೂ ಹೀಗೂ ದಿನ ದೂಡುತ್ತಾರೆ. ಕೆಲವೊಮ್ಮೆ ಕಲಿತ ಹೆಣ್ಣುಮಕ್ಕಳು ನೌಕರಿ ಮಾಡಲು ಹೊರಗೆ ಹೋಗುವುದೂ, ಗಂಡ-ಹೆಂಡಿರು ಪ್ರತ್ಯೇಕ ಮನೆ ಮಾಡುವುದೂ ಪ್ರಾರಂಭ ವಾಗಿದ್ದು ಇಂಥ ಮನೆಗಳಲ್ಲಿ ವೃದ್ಧರಿಗೆ ಸ್ವಾಗತವಿಲ್ಲ.

ಮತ್ತೊಂದು ಕಾರಣವೆಂದರೆ ನಾವು ಈಗ ಹಣಕ್ಕೆ ಬಹಳ ಮಹತ್ವ ಕೊಡುತ್ತಿದ್ದೇವೆ. ಹಣಕ್ಕಾಗಿ ಹೋರಾಡುವ ಇಂದಿನ ಜಗತ್ತಿನಲ್ಲಿ ಹಳಬರು ಯುವಕರಷ್ಟು ಗಳಿಸುವುದು ಕಷ್ಟ. ಆದುದರಿಂದ ಅವರು ನಿರುಪಯೋಗಿ ಎಂಬ ಭಾವನೆ ಬಂದಿದೆ.

ಈಗ ನಗರಗಳು ಬೆಳೆದು, ಅಜ್ಜ-ಅಜ್ಜಿ ಬಂಧು-ಬಳಗ ದವರನ್ನೆಲ್ಲ ಕೂಡಿದ ದೊಡ್ಡ ಗಾತ್ರದ ಕುಟುಂಬಗಳು ಇಂಥ ನಗರಗಳಲ್ಲಿ ವಾಸಿಸುವುದು ದುಸ್ತರವಾಗಿದೆ ಬೇರೆ ಊರಿನಿಂದ ಬಂದು ಬಾಡಿಗೆ ಮನೆಗಳನ್ನು ಹಿಡಿಯುವವರು ಇವರನ್ನೆಲ್ಲ ಸಾಕಲಾರರು. ಅದರಲ್ಲೂ ದುಡಿದು ಸಂಪಾದಿಸಲಾರದ ಮುದುಕ ಮುದುಕಿಯರಿದ್ದರೆ ಬಹಳ ಕಷ್ಟ. ಆದುದರಿಂದ ಸಹಜವಾಗಿಯೇ ಹಳಬರ ಬಗ್ಗೆ ಅಸಡ್ಡೆ ಉಂಟಾಗಬಹುದು.

ಇನ್ನೊಂದು ಕಾರಣವನ್ನೂ ಸೂಚಿಸಬಹುದು. ಅತ್ತೆ-ಮಾವ, ಅಜ್ಜ-ಅಜ್ಜಿಯರನ್ನು ಸಾಕುವುದು ಅಷ್ಟು ಸುಲಭದ ಕೆಲಸವಲ್ಲ. ಈ ಕೆಲಸವನ್ನು ಹಿಂದೆ ಮನೆಯ ಸೊಸೆ ಹಾಗೂ ಮೊಮ್ಮಕ್ಕಳು ಮಾಡುತ್ತಿದ್ದರು. ಮನೆಯ ಗಂಡಸರು

ಆರ್ಥಿಕ ಭಾರ ಹೊರುತ್ತಿದ್ದರಾದರೂ ಹೆಣ್ಣುಮಕ್ಕಳೇ ವೃದ್ಧರ ಸೇವೆಯನ್ನು ಮಾಡುತ್ತಿದ್ದರು, ಆದರೆ ಇಂದು ಈ ಹೆಣ್ಣು ಮಕ್ಕಳು ಮನೆಯಿಂದ ಹೊರಗೆ ಕಚೇರಿಗಳಲ್ಲಿ ಅಥವಾ ಕಾರ್ಖಾನೆಗಳಲ್ಲಿ ಪೂರ್ಣಾವಧಿ ಅಥವಾ ಅರ್ಧಾವಧಿ ದುಡಿಯು ವುದು ಪ್ರಾರಂಭವಾಗಿದೆ. ಇವರಿಗೆ ವೃದ್ಧರನ್ನು ಸಾಕಲು ವೇಳೆಯೂ ಇಲ್ಲ, ವ್ಯವಧಾನವೂ ಇಲ್ಲ.

ನಮ್ಮ ದೇಶದಲ್ಲಿ ನಾವು ಸಂಪ್ರದಾಯಕ್ಕೆ ಬಹಳ ಮಹತ್ವ ಕೊಟ್ಟು ಹಳೆಯ ತಲೆಮಾರಿನವರಿಗೆ ಅಷ್ಟಿಷ್ಟು ಗೌರವ ತೋರಿಸಬಹುದು. ಆದರೆ ಪಶ್ಚಿಮದ ದೇಶಗಳು ಹೆಚ್ಚಾಗಿ ಹೊಸತಿಗೆ ಬೆಲೆ ಕೊಡುತ್ತಿವೆ. ಅಲ್ಲಿ ಹಳೆಯದೆಲ್ಲ ಹಾಳು ಎಂಬ ಭಾವನೆ ಬೆಳೆದಿದೆ. ಅದೇ ರೀತಿಯಲ್ಲಿ ಹಳೆಯ ತಲೆಮಾರಿನವರ ವಿಷಯದಲ್ಲಿಯೂ ಅವರಿಗೆ ಬೇಸರ. ಅಂಥ ದೇಶಗಳಲ್ಲಿ ವೃದ್ಧರು ಸುಖದಿಂದ ಇರಲಾರರು.

## ವೃದ್ಧರ ಕೆಲವು ಸಮಸ್ಯೆಗಳು

ನಾವು ಈಗಾಗಲೇ ಹೇಳಿದಂತೆ ಮಾನವನ ಸರಾಸರಿ ಆಯುರ್ಮಾನ ಹೆಚ್ಚಿದೆ. ಕ್ರಿ. ಶ. ೧೯೦೦ಕ್ಕೆ ಮುಂಚೆ ಅದು ೩೦ ರಿಂದ ೩೫ ಇದ್ದರೆ ಈಗ ಅದು ೭೫ರಿಂದ ೮೦ಕ್ಕೆ ಏರಿದೆ. ಜನರು ಈಗ ೭೫—೮೦ ವಯಸ್ಸಿನವರೆಗೆ ಕೆಲಸ ಮಾಡಲು ಸಮರ್ಥರಾಗಿದ್ದಾರೆ. ಆದರೆ ಹಲವಾರು ಕಾರಣಗಳಿಂದ ಅವ. ರನ್ನು ಆ ಮೊದಲೇ ನಿವೃತ್ತಿ ಮಾಡುವುದರಿಂದ ಅವರು ನಿರುಪ ಯೋಗಿ ಎನ್ನಿಸಿಕೊಳ್ಳುತ್ತಾರೆ. ಇದು ಅವರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ.

ಇನ್ನೊಂದು ಸಮಸ್ಯೆ : ಹಳೆಯ ತಲೆಮಾರಿನಲ್ಲಿದ್ದ ಅವಿಭಕ್ತ ಕುಟುಂಬ ಪದ್ಧತಿ ಈಗ ಬದಲಾಗುತ್ತಿದೆ. ಅಂಥ ಕುಟುಂಬದಲ್ಲಿ ಹಿರಿಯರಿಗೆ ಆಶ್ರಯವಿತ್ತು. ಒಳ್ಳೆಯ ಗೌರವವೂ ಸಿಗುತ್ತಿತ್ತು. ಈಗ ಅದು ಸಿಗುವುದಿಲ್ಲ. ಎಷ್ಟೋ ಕುಟುಂಬಗಳಲ್ಲಿ ಹಿರಿಯರನ್ನು ಮೂಲೆಗೆ ಒತ್ತುತ್ತಿದ್ದಾರೆ. ಕಾಶಿಯಲ್ಲಿ ಸತ್ತರೆ ಪುಣ್ಯ ಸಿಗುತ್ತದೆ ಎಂದು ಹೇಳಿ ತಮ್ಮ ತಂದೆ ತಾಯಿಗಳನ್ನು ಅಥವಾ ಅಜ್ಜ ಅಜ್ಜಿಯರನ್ನು ರೈಲು ಹತ್ತಿಸಿ ಕಳುಹಿಸಿ ಕೊಡುವ ಮಕ್ಕಳೂ ಇದ್ದಾರೆ. ಹೀಗೆ ಅವರು ತಮ್ಮ ಸ್ಥಾನಮಾನ ಕಳೆದುಕೊಂಡಿದ್ದಾರೆ. ಇದು ವೃದ್ಧರಿಗೆ ದುಃಖ ತಂದಿದೆ.

ಬೇರೆ ಬೇರೆ ಕಾರಣಗಳಿಗಾಗಿ ಈಗ ಮಕ್ಕಳು, ಮೊಮ್ಮಕ್ಕಳು ತಮ್ಮ ಹಿರಿಯರನ್ನು ಬಿಟ್ಟು ದೂರ ಹೋಗಿ ಪ್ರತ್ಯೇಕ ಸಂಸಾರ ನಡೆಸುತ್ತಾರೆ. ಅವರು ಈ ಮುದುಕರ ಖರ್ಚಿಗೆಂದು ಹಣ ಕಳುಹಿಸಬಹುದು. ಆದರೆ ಅವರು ತಮ್ಮ ಮಕ್ಕಳು ಮೊಮ್ಮಕ್ಕಳ ಪ್ರೀತಿ ಸಿಗದೇ ದುಃಖಪಡುತ್ತಾರೆ.

ಇನ್ನು ವೃದ್ಧ ವಿಧವೆಯರ ಸಮಸ್ಯೆಯ ಬಗ್ಗೆ ನೋಡೋಣ. ಇವರ ಸಮಸ್ಯೆ ಉಳಿದವರ ಸಮಸ್ಯೆಗಳಿಗಿಂತ ಭೀಕರವಾಗಿದೆ. ವಿಜ್ಞಾನಿಗಳ ಲೆಕ್ಕಾಚಾರದಂತೆ ಗಂಡಸರಿಗಿಂತ ಹೆಂಗಸರಿಗೆ ಆಯುಷ್ಯ ಹೆಚ್ಚು. ಅಲ್ಲದೇ ಗಂಡನಿಗಿಂತ ಹೆಂಡತಿ ಸಣ್ಣ ವಯಸ್ಸಿನವಳು ಇರುತ್ತಾಳೆ. ಹೀಗಾಗಿ ಗಂಡಸು ಮೊದಲು ತೀರಿಹೋಗಿ ಹೆಂಡತಿ ವಿಧವೆಯಾಗಿ ಬಾಳಬೇಕಾಗುತ್ತದೆ. ಅವಳು ವಿಧವೆಯಾದ ನಂತರ ಅನೇಕ ವರ್ಷಗಳ ಕಾಲ ಒಂಟಿ ಜೀವನ ನಡೆಸಬೇಕಾದ ಪರಿಸ್ಥಿತಿ ಬರುತ್ತದೆ. ಅಥವಾ ಕೆಲ

ವೊಮ್ಮೆ ತನ್ನ ಮಕ್ಕಳು ಹಾಗೂ ಸೊಸೆಯಂದಿರ ಆಶ್ರಯದಲ್ಲಿ ಅವರು ಹೇಳಿದಂತೆ ಕೇಳಿಕೊಂಡು ಇರಬೇಕಾಗುತ್ತದೆ. ಸಮಾಜವು ಈ ವೃದ್ಧ ವಿಧವೆಯರಿಗೆ ಯಾವ ಸ್ಥಾನಮಾನವನ್ನೂ ಕೊಟ್ಟಿರುವುದಿಲ್ಲ.

ವೃದ್ಧರು ಆರ್ಥಿಕ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಅವರು ಮುಪ್ಪಿನಲ್ಲಿ ಕೊನೆಯ ತನಕ ದುಡಿದು ಸಂಪಾದಿಸಬೇಕೆಂದು ಬಯಸಬಹುದು. ಆದರೆ ಐವತ್ತೈದನೇ ವಯಸ್ಸಿಗೆ ಅಥವಾ ಐವತ್ತೆಂಟನೆಯ ವಯಸ್ಸಿಗೆ ನಿವೃತ್ತರಾಗುವುದರಿಂದ ಅವರ ಸಂಪಾದನೆ ನಿಲ್ಲುತ್ತದೆ. ಅನಂತರ ಅವರು ತಮ್ಮ ಮಕ್ಕಳನ್ನು ಅಥವಾ ಇತರರನ್ನು ಅವಲಂಬಿಸಬೇಕಾಗುತ್ತದೆ. ತಾವು ಎಲ್ಲರಿಗೂ ಆರ್ಥಿಕವಾಗಿ ಭಾರವಾಗಿದ್ದೇವೆ ಎಂಬ ಭಾವನೆ ಅವರಿಗೆ ಬರುತ್ತದೆ.

ಮುಪ್ಪಿನಲ್ಲಿ ಹಲವಾರು ವಿಧವಾದ ರೋಗರುಜಿನಗಳು ಕಾಡುವುದು ಸಹಜ. ಅಂಥ ಸಂದರ್ಭಗಳಲ್ಲಿ ಕುಟುಂಬದ ಜನರು ಅವರನ್ನು ಸರಿಯಾಗಿ ಆರೈಕೆ ಮಾಡಿದರೆ ಕಷ್ಟವಿಲ್ಲ. ಆದರೆ ಹಲವಾರು ಕಾರಣಗಳಿಂದ ಈಗ ಇದು ಸಾಧ್ಯವಾಗುವದಿಲ್ಲ. ಕಾಹಿಲೆ ಬಂದಾಗ ಮಕ್ಕಳು ಮುದುಕರನ್ನು ಆಸ್ಪತ್ರೆಗಳಿಗೆ ಅಟ್ಟಿ ಸುಮ್ಮನೆ ಇರುವುದೂ ಇದೆ. ಇಂಗ್ಲಂಡ್ ಮುಂತಾದ ದೇಶಗಳ ಆಸ್ಪತ್ರೆಯ ಹಾಸಿಗೆಗಳಲ್ಲಿ ಇಂಥ ಮುದುಕರೇ ತುಂಬಿರುತ್ತಾರಂತೆ.

ದೇಹದ ಕಾಹಿಲೆಗಳು ಮಾತ್ರವಲ್ಲ ಮಾನಸಿಕ ಕಾಹಿಲೆಗಳೂ ಇವೆ. ತಾವು ಯಾರಿಗೂ ಬೇಡ, ತಮ್ಮನ್ನು ಯಾರು ಕೇಳುವ

ದಿಲ್ಲ, ತಮಗೆ ಪ್ರೀತಿ ಸಿಗುವದಿಲ್ಲ ಎಂದು ವೃದ್ಧರು ಕೊರಗಿ ಕಾಯಿಲೆ ಬೀಳಬಹುದು. ಇಂಥವರು ಹುಚ್ಚರಂತೆ ದೇಶಾಂತರ ಅಲೆಯುವದೂ ಇದೆ. ನಿವೃತ್ತಿಯು ವೃದ್ಧರಲ್ಲಿ ಒಂದು ರೀತಿಯ ಬೇಸರವನ್ನೂ, ನಿರುತ್ಸಾಹವನ್ನೂ ತರುತ್ತದೆ. ತಾವು ಏನು ಮಾಡಬೇಕು, ಹೊತ್ತು ಹೇಗೆ ಕಳೆಯಬೇಕು ಎಂಬ ಕಳವಳ ವನ್ನು ತರುತ್ತದೆ. ಈ ಎಲ್ಲ ಸಮಸ್ಯೆಗಳಿಗೆ ಉತ್ತರವೆಂದರೆ ಅವರಿಗೆ ಅನುಕೂಲವಾದ ವೃದ್ಧರ ಮನೆಗಳನ್ನು ಕಟ್ಟಿಸಿಕೊಡು ವುದು ಎಂದು ಕೆಲವರು ಹೇಳಬಹುದು. ಆದರೆ ಈ ಕಾಹಿಲೆಗೆ ಇದೇ ರಾಮಬಾಣವಲ್ಲ. ಎಲ್ಲರಿಗೂ ಇಂಥ ಮನೆಗಳನ್ನು ಕಟ್ಟಿಸಿ ಕೊಡುವುದು ಅಸಾಧ್ಯ ಕೆಲಸ. ಅಲ್ಲದೇ ಕುಟುಂಬಗಳಲ್ಲಿ ಸಿಗುವ ಸುಖಶಾಂತಿ ಅವುಗಳಲ್ಲಿ ಸಿಗುವುದಿಲ್ಲ ಎಂಬುದು ಸಾಮಾನ್ಯ ಅನುಭವ. ವೃದ್ಧಾಪ್ಯ ವೇತನಕೊಟ್ಟು ಅವರು ಬೇಕಾದಲ್ಲಿ ಇರು ವಂತೆ ಹೇಳಬಹುದು. ಆದರೆ ಈ ವೃದ್ಧಾಪ್ಯವೇತನ ಈ ಬೆಲೆ ಏರಿಕೆಯ ಕಾಲದಲ್ಲಿ ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಎಂಬ ಗಾದೆಯಂತೆ ಯಾವುದಕ್ಕೂ ಸಾಲದು. ಒಟ್ಟಿನಲ್ಲಿ ಇಂದು ವೃದ್ಧರು ಹಲವಾರು ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಈ ಸಮಸ್ಯೆಗಳಿಗೆ ಅಲ್ಪ ಸ್ವಲ್ಪವಾದರೂ ಪರಿಹಾರ ಸಿಗಬೇಕು.

## ಅಧ್ಯಾಯ–೨

# ವಿವಿಧ ದೇಶಗಳಲ್ಲಿ ವೃದ್ಧರ ರಕ್ಷಣೆ

ಮುಪ್ಪನ್ನು ಯಾರೂ ಪ್ರೀತಿಯಿಂದ ಸ್ವಾಗತಿಸುವದಿಲ್ಲ. ಮೊದಲಿನಿಂದಲೂ ಮಾನವರಿಗೆ ಮುಪ್ಪಿನ ಬಗ್ಗೆ ಭಯ ಇದ್ದೇ ಇತ್ತು. ಆದರೆ ಮುಪ್ಪು ಸಾವಿನ ಹಾಗೆಯೇ ಅನಿವಾರ್ಯ. ಅದನ್ನು ಅಲ್ಪ ಸ್ವಲ್ಪ ಮುಂದೂಡಬಹುದು. ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ನಮ್ಮಲ್ಲಿ ಕಾಯಕಲ್ಪ ಎಂಬ ಆಯುರ್ವೇದ ಪದ್ಧತಿಯ ಒಂದು ಚಿಕಿತ್ಸೆಯಿದೆ. ಅದರಿಂದ ಮುಪ್ಪನ್ನು ಕೆಲ ಕಾಲದ ಮಟ್ಟಿಗೆ ಮುಂದೂಡಿದ ಉದಾಹರಣೆಗಳು ಇವೆ. ಆದರೆ ಯಾರೂ ಚಿರಂಜೀವಿಗಳಾಗಿಲ್ಲ. ಆದರೂ ಮುಪ್ಪನ್ನು ಜಯಿಸುವ ಪ್ರಯತ್ನ ಮೊದಲಿನಿಂದಲೂ ನಡೆದೇ ಇದೆ. ಯಯಾತಿಯ ಕಥೆ, ಚ್ಯವನ ಮಹರ್ಷಿಯ ಕಥೆ ಪ್ರಾಚೀನಕಾಲದವು. ಈಗ ಜೀವವಿಜ್ಞಾನಿಗಳು ಬಗೆಬಗೆಯ ಪ್ರಯೋಗಗಳನ್ನು ನಡೆಸಿದ್ದಾರೆ. ಇದೊಂದು ಬೆನ್ನುಬಿಡದ ಬೇತಾಳದ ಕಥೆಯಂತಿದೆ. ಜನರು ಬಗೆ ಬಗೆಯ ಔಷಧಗಳನ್ನು ನುಂಗಿ, ಮಾಟ ಮಂತ್ರಗಳನ್ನು ಮಾಡಿ, ಕೃತಕ ಅವಯವಗಳನ್ನು ಜೋಡಿಸಿಕೊಂಡು ಮುಪ್ಪನ್ನು ಮರೆಯಲು ಪ್ರಯತ್ನಮಾಡಿದ್ದಾರೆ. ಏನೇ ಇದ್ದರೂ ಮುಪ್ಪನ್ನು ಎಲ್ಲರೂ ಎದುರಿಸಲೇ ಬೇಕು.

ಹಿಂದಿನ ಕಾಲದಲ್ಲಿ ಮೂರು ನಾಲ್ಕು ತಲೆಮಾರುಗಳಿಗೆ ಸೇರಿದ ಜನರು ಎಲ್ಲರೂ ಒಂದೇ ಕುಟುಂಬದಲ್ಲಿರುತ್ತಿದ್ದರು. ಆಗ ಮುಪ್ಪಿನ ಸಮಸ್ಯೆಯು ಅಷ್ಟು ಭೀಕರವಾಗಿರಲಿಲ್ಲ. ಆದರೆ

ಇತ್ತೀಚೆಗೆ ಈ ಸಮಸ್ಯೆ ಗಂಭೀರ ರೂಪ ತಳೆಯುತ್ತಿದೆ. ಅಭಿವೃದ್ಧಿ ಹೊಂದಿದ ಪಶ್ಚಿಮ ಜಗತ್ತಿನ ದೇಶಗಳಲ್ಲಿ ಪರಿಸ್ಥಿತಿ ಬಹಳ ಕೆಟ್ಟಿದೆ. ಈಗ ಆ ದೇಶಗಳ ಜನಸಂಖ್ಯೆಯಲ್ಲಿ ಶೇಕಡಾ ಹತ್ತರಿಂದ ಹದಿನೆಂಟರಷ್ಟು ಜನರು ವೃದ್ಧರಿರುತ್ತಾರೆ. ಅವರಿಗೆ ಕುಟುಂಬಗಳಲ್ಲಿ ಆಶ್ರಯ ಮತ್ತು ಆರೈಕೆ ಸಿಗುವದಿಲ್ಲ, ಸುದೈವ ದಿಂದ ನಮ್ಮ ದೇಶದಲ್ಲಿ ಅಲ್ಲಿನಷ್ಟು ಪರಿಸ್ಥಿತಿ ಕೆಟ್ಟಿಲ್ಲ. ಆದರೂ ನಾವು ಕಣ್ಣುಮುಚ್ಚಿ ಕುಳಿತು ಕೊಳ್ಳುವುದು ತಪ್ಪು. ಜಗತ್ತಿನ ವಿವಿಧ ದೇಶಗಳು ವೃದ್ಧರ ಸಮಸ್ಯೆಗಳಿಗೆ ಎಂಥ ಪರಿಹಾರ ಗಳನ್ನು ಕೊಡುತ್ತಿವೆ ಎಂಬುದನ್ನು ನೋಡೋಣ.

ಎಲ್ಲ ದೇಶಗಳಲ್ಲಿ ಮೊದಮೊದಲು ಹುಟ್ಟಿಕೊಂಡ ರಕ್ಷಣೆಯ ಕ್ರಮಗಳೆಂದರೆ ವೃದ್ಧರಿಗೆ ಕುಟುಂಬದ ಹೊರಗೆ ಆಶ್ರಯ ಕೊಡುವದು. ಅವರಿಗಾಗಿ ವೃದ್ಧರ ಮನೆಗಳನ್ನು (Old People's Homes) ಅಥವಾ ನಿರ್ಗತಿಕರ ಗೃಹಗಳನ್ನು (Homes for the Destitutes) ಅಥವಾ ಸಹಕಾರಿ ಸಮು ದಾಯಗಳನ್ನು ಕಟ್ಟಿಸಿಕೊಟ್ಟು ಅಲ್ಲಿ ಊಟ, ವಸತಿ, ಔಷಧಿ, ಮನರಂಜನೆಗಳನ್ನು ಕೊಡುವ ಪ್ರಯತ್ನ ನಡೆಯಿತು. ಅನಾಥ ರಾದ ಜನರಲ್ಲಿ ಕೆಲವೇ ಕೆಲವು ಜನರಿಗೆ ಇಂಥ ರಕ್ಷಣೆಯನ್ನು ಕೊಡುವುದು ಸಾಧ್ಯ. ಇದರ ಒಂದು ಮುಖ್ಯ ಕೊರತೆಯೆಂದರೆ ಹೊರಗಿನ ಆಶ್ರಯವು ಅವರನ್ನು ಬಂಧು ಬಳಗ ಮಿತ್ರರಿಂದ ದೂರ ಒಯ್ಯುತ್ತದೆ.

ನಂತರದ ಕಾಲದಲ್ಲಿ ಸರಕಾರೀ ನೌಕರರಿಗೆ, ವಿವಿಧ ಉದ್ಯಮ ಸಂಘ ಸಂಸ್ಥೆಗಳಲ್ಲಿ ಕೆಲಸಮಾಡುವ ನೌಕರರಿಗೆ ಅವರ

ನಿವೃತ್ತಿಯ ನಂತರ ಪಿಂಚಣಿ ಕೊಡುವ ಪದ್ಧತಿ (Retirement Pension) ಬಳಕೆಗೆ ಬಂತು. ಸುಮಾರು ಇಪ್ಪತ್ತೈದರಿಂದ ಮೂವತ್ತು ವರ್ಷ ಸೇವೆ ಸಲ್ಲಿಸಿದ ಮೇಲೆ ಅವರಿಗೆ ಪಿಂಚಣಿ ಸಿಗುತ್ತದೆ. ಇದನ್ನು ಹಣದ ರೂಪದಲ್ಲಿ ಪ್ರತಿತಿಂಗಳು ಕೊಡುತ್ತಾರೆ.

ಬರಬರುತ್ತ ಸರಕಾರಗಳು ಹೆಚ್ಚು ಹೆಚ್ಚು ಜನರಿಗೆ ಸಹಾಯ ಕೊಡುವ ಯೋಜನೆಗಳನ್ನು ಹಾಕಿಕೊಂಡವು. ಉದಾಹರಣೆಗೆ ವೃದ್ಧಾಪ್ಯ ವಿಮಾ ಯೋಜನೆಯನ್ನು Old Age Insurance) ನಾವು ಇಲ್ಲಿ ಪ್ರಸ್ತಾಪಿಸಬಹುದು. ಅಮೆರಿಕೆಯ ಸಂಯುಕ್ತ ಸಂಸ್ಥಾನ ಮತ್ತು ಇತರ ಕೆಲವು ದೇಶಗಳಲ್ಲಿ ಇಂಥ ಯೋಜನೆಗಳು ಜಾರಿಯಲ್ಲಿದೆ. ವಿಮಾಯೋಜನೆಗಳ ಲಾಭ ಎಲ್ಲರಿಗೂ ತಲುಪುವದಿಲ್ಲ. ಅಲ್ಲದೇ ಅಂಥ ಯೋಜನೆಗಳ ಲಾಭ ಪಡೆಯುವ ಕೆಲಸಗಾರರು ವಂತಿಗೆ ಅಥವಾ ತೆರಿಗೆಯನ್ನು ಕೊಡಬೇಕು. ತೀರ ಬಡವರಿಗೆ ಇದು ಸಾಧ್ಯವಿಲ್ಲ. ಆದುದರಿಂದ ಹಲವು ಸರಕಾರಗಳು ಅರುವತ್ತೈದು-ಎಪ್ಪತ್ತು ವರ್ಷ ತುಂಬಿದ ಮುದುಕರಿಗೆ ತಮ್ಮ ಖಜಾನೆಯಿಂದ ವೃದ್ಧಾಪ್ಯವೇತನ Old Age Pension) ಕೊಡುವ ಪದ್ಧತಿಯನ್ನು ಪ್ರಾರಂಭಿಸಿವವು.

ಈ ವಿವಿಧ ರೀತಿಯ ಸಹಾಯಗಳನ್ನು ಕೊಟ್ಟರೂ ವೃದ್ಧರ ಸಮಸ್ಯೆಗಳು ಇನ್ನೂ ಬಗೆಹರಿದಿಲ್ಲ. ಅವರು ಕುಟುಂಬದಲ್ಲಿ ಸುಖವಾಗಿರುವಷ್ಟು ಬೇರೆ ವ್ಯವಸ್ಥೆಗಳಲ್ಲಿ ಸುಖವಾಗಿ ಇರುವದಿಲ್ಲ. ಇದನ್ನು ತಿಳಿದುಕೊಂಡ ಸರಕಾರಗಳು ಈಗ ಮುದುಕರಿರುವ ಕುಟುಂಬಗಳಿಗೆ ಅಲ್ಲಿಯೇ ಸಹಾಯ ಕೊಡುವ ಯೋಜನೆಗಳನ್ನು ಹಾಕಿಕೊಂಡಿವೆ. ಅವರಿಗಾಗಿ ಹಲವು ರೀತಿಯ ರಿಯಾಯತಿಗಳನ್ನು ಕೊಡುತ್ತಿವೆ.

ಈ ಶತಮಾನದಲ್ಲಿ ವೃದ್ಧರಿಗೆ ರಕ್ಷಣೆ ಕೊಡುವ ಹಲವು ಉಪಾಯುಗಳನ್ನು ಸರಕಾರಗಳು ಯೋಜಿಸಿವೆ. ಆದರೆ ಅವು ಒಂದೇ ರೂಪದಲ್ಲಿಲ್ಲ. ನಾವು ಉದಾಹರಣೆಗೆಂದು ಕೆಲವು ದೇಶಗಳ ಯೋಜನೆಗಳನ್ನು ಸಂಕ್ಷಿಪ್ತವಾಗಿ ವಿವರಿಸಬಹುದು.

## ಸೋವಿಯಟ್ ರಷ್ಯಾ

ಸೋವಿಯಟ್ ರಷ್ಯಾ ಸಮಾಜವಾದಿ ದೇಶ. ಅಲ್ಲಿ ದುಡಿಯಲು ಸಾಧ್ಯವಾಗದ ವೃದ್ಧರು, ಕೈಕಾಲು ಕಣ್ಣು ಕಳೆದುಕೊಂಡವರು, ಅನಾಥರು ಸರಕಾರದಿಂದ ಪೂರ್ಣ ಸಹಾಯ ಪಡೆಯುತ್ತಾರೆ. ಸದ್ಯ ಐವರು ಸೋವಿಯಟ್ ಪ್ರಜೆಗಳಲ್ಲಿ ಒಬ್ಬರಿಗೆ ಸರಕಾರದಿಂದ ಇಂಥ ಸಹಾಯ ಸಿಗುತ್ತದೆ. ಸೋವಿಯಟ್ ನಿಯಮದಂತೆ ಅರುವತ್ತು ವರ್ಷ ತುಂಬಿದ ಗಂಡಸರು ಹಾಗೂ ಐವತ್ತೈದು ವರ್ಷ ತುಂಬಿದ ಹೆಂಗಸರು ಪಿಂಚಣಿ ಪಡೆಯಲು ಅರ್ಹರು. ಇವರು ಕಾರ್ಖಾನೆಗಳಲ್ಲಿ ಅಥವಾ ಕಚೇರಿಗಳಲ್ಲಿ ಅಥವಾ ಹೊಲಗದ್ದೆಗಳಲ್ಲಿ ಅಥವಾ ಬೇರೆ ಕೆಲಸಗಳಲ್ಲಿ ದುಡಿದವರಾಗಿರಬೇಕು. ಪಿಂಚಣಿ ಪಡೆಯಲು ಇವರು ಕಷ್ಟ ಪಡಬೇಕಾಗಿಲ್ಲ. ತಮಗೆ ಪಿಂಚಣಿ ಸಿಗುವ ವಯಸ್ಸು ಆದ ಬಗ್ಗೆ ಹಾಗೂ ತಾವು ಆ ವರೆಗೆ ಕೆಲಸ ಮಾಡುತ್ತಿದ್ದ ಬಗ್ಗೆ ದಾಖಲೆ ತೋರಿಸಿದರೆ ಸಾಕು. ಈ ವ್ಯವಹಾರ ನೋಡಿಕೊಳ್ಳಲು ಒಂದು ಸಾಮಾಜಿಕ ವಿಮಾ ಸಚಿವಾಲಯ ಇದೆ. ಅದು ಸುಮಾರು ೧೫೦೦ ವಸತಿ ಗೃಹಗಳನ್ನು ನಡೆಸುತ್ತದೆ. ಈ ವಸತಿಗೃಹಗಳಲ್ಲಿ ಯಾರೂ ದಿಕ್ಕಿಲ್ಲದ ವೃದ್ಧರು ಇರುತ್ತಾರೆ. ಇವರಿಗೆ ಊಟ, ವಸತಿ, ವಾಚನಾಲಯ, ಮನರಂಜನೆ ಇವುಗಳನ್ನು ಪ್ರಕ್ಕಟೆಯಾಗಿ ಕೊಡುತ್ತಾರೆ.

ವೈದ್ಯರ ನೆರವೂ ಸಿಗುತ್ತದೆ. ಇದು ಅಲ್ಲದೇ ಅವರಿಗೆ ಪ್ರತಿ ತಿಂಗಳು ನಿಗದಿ ಪಡಿಸಿದಂತೆ ಸ್ವಲ್ಪ ಮಾಶಾಸನ ಕೊಡುತ್ತಾರೆ. ಆ ಹಣವನ್ನು ಅವರು ತಮಗೆ ಬೇಕಾದಂತೆ ಖರ್ಚು ಮಾಡ ಬಹುದು. ಪಿಂಚಣಿ ಸಿಕ್ಕಿದ ಮೇಲೆಯೂ ಕೆಲವರು ಕೆಲಸ ಮಾಡಲು ಬಯಸುತ್ತಾರೆ. ಅಂಥವರಿಗೆ ಅರ್ಧಾವಧಿ ಕೆಲಸ ಕೊಡುತ್ತಾರೆ.

ಸೋವಿಯಟ್ ದೇಶದಲ್ಲಿ ಇಷ್ಟೆಲ್ಲ ಅನುಕೂಲತೆಗಳಿದ್ದರೂ ಕುಟುಂಬವೇ ನಿಜವಾದ ಆಶ್ರಯ ಎಂಬುದು ಸರಕಾರಕ್ಕೆ ಗೊತ್ತಿದೆ. ಆದುದರಿಂದ ವೃದ್ಧರನ್ನು ಅವರವರ ಮನೆಗಳಲ್ಲಿಯೇ ಇರುವಂತೆ ಪ್ರೋತ್ಸಾಹ ಕೊಡುತ್ತಿದ್ದಾರೆ. ಅವರಿಗೆ ಬೇಕಾದ ಸಹಾಯವನ್ನು ಅವರವರ ಮನೆಗಳಿಗೆ ಮುಟ್ಟಿಸುವ ಯೋಜನೆ ಇದೆ.

## ಜೆಕೋಸ್ಲೋವಾಕಿಯಾ

ಜೆಕೋಸ್ಲೋವಾಕಿಯಾ ಇನ್ನೊಂದು ಸಮಾಜವಾದಿದೇಶ. ಇಲ್ಲಿ ಅರುವತ್ತೈದು ವರ್ಷ ತುಂಬಿದ ಜನರಿಗೆ ವೃದ್ಧಾಪ್ಯ ವೇತನ ಸಿಗುತ್ತದೆ. ಈ ವೃದ್ಧರಲ್ಲದೆ ಮಾನಸಿಕವಾಕವಾಗಿ ಬಳಲುವ ಜನರಿಗೂ, ಅಂಗವಿಕಲರಿಗೂ ಸಹಾಯ ದೊರಕು ತ್ತಿದೆ. ಈ ದೇಶದ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ಇಪ್ಪ– ತ್ತೆರಡು ಜನರಿಗೆ ಒಂದಲ್ಲ ಒಂದು ಬಗೆಯ ಪಿಂಚಣಿ ಸಿಗುತ್ತದೆ. ದೇಶದ ರಾಜಧಾನಿಯಾದ ಪ್ರಾಗ್ ನಗರದಲ್ಲಿ ಸುಮಾರು ಶೇಕಡಾ ಇಪ್ಪತ್ತೆರಡರಷ್ಟು ಮಂದಿಗೆ—ಅಂದರೆ ಅಲ್ಲಿರುವ ನಾಲ್ಕು ಜನರಲ್ಲಿ ಒಬ್ಬನಿಗೆ— ಪಿಂಚಣಿ ಸಿಗುತ್ತದೆ. ಈ ದೇಶದ

ಜನರ ಸರಾಸರಿ ಆಯುರ್ಮಾನ ಒಂದೇ ಸಮನೆ ಹೆಚ್ಚುತ್ತ ಹೋಗಿದೆ. ಆದುದರಿಂದ ಇಲ್ಲಿ ಮುದುಕರು ಹೆಚ್ಚು. ಈ ಮುದುಕರನ್ನು ಅವರವರ ಕುಟುಂಬಗಳಲ್ಲಿಯೇ ನೋಡಿಕೊಳ್ಳುವ ವ್ಯವಸ್ಥೆ ಮಾಡಿದ್ದಾರೆ. ಸರಕಾರದಿಂದ ನೇಮಕ ಹೊಂದಿದ ಕೆಲವು ಸಹಾಯಕರು ವೃದ್ಧರಿರುವ ಕುಟುಂಬಗಳಿಗೆ ಹೋಗಿ ಮೇಲಿಂದಮೇಲೆ ಭೇಟಿಯಾಗಿ ಸಹಾಯ ಸಲ್ಲಿಸುತ್ತಾರೆ. ಈ ಸರಕಾರದ ಮಂದಿಯಲ್ಲದೇ ಇತರ ಜನರು ಕೂಡ ಪಿಂಚಣಿದಾರರನ್ನು ಬಂದು ನೋಡುತ್ತಾರೆ.

ಕುಟುಂಬದ ಹೊರಗೆ ಆಶ್ರಯ ಕೊಡುವ ಪದ್ಧತಿ ಅಲ್ಪ ಸ್ವಲ್ಪ ಬಳಕೆಯಲ್ಲಿದೆ. ಇವರಿಗಾಗಿ ವಸತಿ ಗೃಹಗಳನ್ನು ತೆರೆದಿದ್ದಾರೆ. ಸರಕಾರವು ಪ್ರಾಗ್ ನಗರದಲ್ಲಿಯೂ ಇತರ ಕೆಲವು ನಗರಗಳಲ್ಲಿಯೂ ಪಿಂಚಣಿದಾರರ ವಸತಿ ಗೃಹಗಳನ್ನು ಸ್ಥಾಪಿಸಿದೆ. ಎಲ್ಲ ಪಿಂಚಣಿದಾರರಿಗೆ ಸಿನೇಮಾ, ನಾಟಕ ಮತ್ತು ಸಾರ್ವಜನಿಕ ಬಸ್ಸು ರೈಲುಗಳಲ್ಲಿ ಸ್ವಲ್ಪ ರಿಯಾಯತಿ ಕೊಡುತ್ತಾರೆ,

## ಅಮೆರಿಕೆಯ ಸಂಯುಕ್ತ ಸಂಸ್ಥಾನ

ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ವೃದ್ಧರ ಸಂಖ್ಯೆಯು ಒಟ್ಟು ಜನಸಂಖ್ಯೆಯ ಸುಮಾರು ೧೫%ರಷ್ಟು ಇದೆ. ಇಲ್ಲಿಯ ಕೆಲಸಗಾರರು ತಮ್ಮ ಅರವತ್ತೈದನೇ ವಯಸ್ಸಿಗೆ ನಿವೃತ್ತರಾಗುತ್ತಾರೆ, ಇವರಿಗೆಲ್ಲ ವೃದ್ಧಾಪ್ಯ ವಿಮೆಯ ಸವಲತ್ತು ಇದೆ. ಕಾರ್ಖಾನೆ ಮತ್ತು ಕಚೇರಿಗಳಲ್ಲಿ ದುಡಿಯುವ ಕೆಲಸಗಾರರೂ ವಿವಿಧ ವೃತ್ತಿಗಳನ್ನು ಅನುಸರಿಸುವ ಜನರೂ, ಬೇಸಾಯ ಮಾಡುವ ರೈತರೂ, ಕೂಲಿಕಾರರೂ ಈ ವಿಮಾ

ಯೋಜನೆಗೆ ಸೇರಬಹುದು. ಈ ಎಲ್ಲ ಜನರು ತಾವು ದುಡಿಯು ತ್ತಿರುವಾಗ ವಿಮಾ ಯೋಜನೆಗಾಗಿ ತಮ್ಮ ಆದಾಯದ ಒಂದು ಚಿಕ್ಕ ಭಾಗವನ್ನು ತೆರಿಗೆಯ ರೂಪದಲ್ಲಿ ಕೊಟ್ಟಿರುತ್ತಾರೆ. ಇವರು ಕೊಟ್ಟ ಹಣಕ್ಕೆ ಮಾಲಿಕರು ಕೊಡುವ ಪಾಲನ್ನು ಸೇರಿಸಿ ಮುಂದೆ ನಿವೃತ್ತಿಯ ನಂತರ ಕೆಲಸಗಾರರಿಗೆ ಪ್ರತಿ ತಿಂಗಳಿಗೆ ವೃದ್ಧಾಪ್ಯ ವೇತನವೆಂದು ಕೊಡುತ್ತಾರೆ. ಅಮೆರಿಕೆಯಲ್ಲಿ ೧೯೩೫ ರಿಂದಲೂ ಸಾಮಾಜಿಕ ಭದ್ರತಾ ಯೋಜನೆಯ ಅಂಗ ವಾಗಿ ಇಂಥ ಸಹಾಯ ಸಿಗುತ್ತಿದೆ.

ಇಲ್ಲಿ ಸಾಮಾಜಿಕ ಭದ್ರತೆಯ ಅಂಗವಾಗಿ ಇನ್ನೊಂದು ರೀತಿಯ ಸಹಾಯ ಲಭ್ಯವಾಗಿದೆ. ಇದಕ್ಕೆ ಯಾರೂ ವಂತಿಗೆ ಕೊಡಬೇಕಾಗಿಲ್ಲ. ಇದು ತೀರ ಕಡಿಮೆ ಆದಾಯ ಇರುವವರಿಗೆ ಸಿಗುತ್ತದೆ. ಹಾಗೆಯೇ ವೃದ್ಧರಿಗೆ, ಕುರುಡರಿಗೆ, ಅಂಗವಿಕಲರಿಗೆ ಇದರಿಂದ ಲಾಭ ಸಿಗುತ್ತದೆ. ದುರ್ಬಲವರ್ಗದ ಜನರಿಗೆ ಒಂದಿಷ್ಟು ಕನಿಷ್ಠ ಆದಾಯ ಸಿಗಬೇಕು ಎಂಬ ಉದ್ದೇಶದಿಂದ ಇದನ್ನು ಪ್ರಾರಂಭಿಸಲಾಯಿತು. ಸುಮಾರು ನಲವತ್ತು ಲಕ್ಷ ಅಮೆರಿಕನ್ನರು ಈ ಸಹಾಯ ಪಡೆಯುತ್ತಿದ್ದಾರೆ. ಇದನ್ನು ಪೂರಕಭದ್ರತಾ ಆದಾಯಯೋಜನೆ ಎಂದು ಕರೆಯಲಾಗುತ್ತಿದೆ. ಇದರ ಎಲ್ಲ ಖರ್ಚನ್ನು ಕೇಂದ್ರ ಸರಕಾರವೇ ವಹಿಸಿಕೊಳ್ಳುತ್ತದೆ.

ಸೋವಿಯಟ್ ರಷ್ಯಾ ಮೊದಲಾದ ದೇಶಗಳಲ್ಲಿ ವೃದ್ಧರಿ ಗೋಸ್ಕರ ಇರುವಂಥ ಸರಕಾರೀ ವಸತಿ ಗೃಹಗಳು ಅಥವಾ ವೃದ್ಧಾಶ್ರಮಗಳು ಅಮೆರಿಕೆಯಲ್ಲಿ ಇಲ್ಲ. ಆದರೆ ಅಲ್ಲಿ ಖಾಸಗಿ ಸಂಸ್ಥೆಗಳು ನಡೆಸುವ ವೃದ್ಧಾಶ್ರಮಗಳು ಇವೆ. ಅಲ್ಲಲ್ಲಿ ವೃದ್ಧರೇ

ಮನೆಮಾಡಿಕೊಂಡಿರುವ ಚಿಕ್ಕ ಚಿಕ್ಕ ಗ್ರಾಮಗಳು ಈಗ ಕಾಣಿಸಿ ಕೊಳ್ಳುತ್ತಿವೆ. ಇಲ್ಲಿ ವೃದ್ಧರು ತಮ್ಮ ಕೊನೆಯ ದಿನಗಳನ್ನು ಕಳೆಯುತ್ತಾರೆ. ತಾವು ಗಳಿಸಿಟ್ಟ ಹಣದಿಂದ ಅಥವಾ ಪಿಂಚಣಿ ಯಿಂದ ಬರುವ ಹಣದಿಂದ ತಮ್ಮ ಊಟ, ಉಡುಗೆ, ವಸತಿಯ ಖರ್ಚನ್ನು ಕೊಡುತ್ತಾರೆ. ಇಂಥ ಆಶ್ರಮಗಳು ಕುಟುಂಬಗಳು ಕೊಡುವ ಪ್ರೀತಿ, ವಿಶ್ವಾಸ ಮತ್ತು ಆರೈಕೆಯನ್ನು ಕೊಡುವುದು ಸಾಧ್ಯವಿಲ್ಲ. ಆದರೆ ಕೆಲವು ಮುದುಕರಾದವರೂ ಇಲ್ಲಿ ಆಶ್ರಯ ಪಡೆಯುತ್ತಿದ್ದಾರೆ.

## ಜಪಾನ

ಜಪಾನು ಏಷ್ಯಾದ ದೇಶ. ಏಷ್ಯಾದ ಇತರ ದೇಶಗಳಲ್ಲಿ ದ್ದಂತೆ ಜಪಾನಿನಲ್ಲಿಯೂ ಅವಿಭಕ್ತ ಕುಟುಂಬಗಳು ಇದ್ದವು. ಅವುಗಳಲ್ಲಿ ವೃದ್ಧರಿಗೆ ಒಳ್ಳೆಯ ಆಶ್ರಯ ಸಿಗುತ್ತಿತ್ತು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಅಲ್ಲಿ ನಗರಗಳ ಪ್ರಭಾವ ಹೆಚ್ಚಿದೆ. ಕೈಗಾರಿಕೆಗಳು ಬೆಳೆದಿವೆ. ಹಳೆಯ ಕುಟುಂಬ ಪದ್ಧತಿ ಬದ ಲಾಗುತ್ತಿದೆ. ಜನರ ಸರಾಸರಿ ಆಯುರ್ಮಾನ ಹೆಚ್ಚಿದೆ. ವೃದ್ಧರ ಸಂಖ್ಯೆ ಬೆಳೆಯುತ್ತ ಹೋಗಿದೆ. ೧೯೫೦ರಲ್ಲಿ ೬೫ ವರ್ಷ ತುಂಬಿದ ವೃದ್ಧರ ಪ್ರಮಾಣ ನೂರಕ್ಕೆ ಐದರಷ್ಟೂ ಇರಲಿಲ್ಲ. ಮೂವತ್ತು ವರ್ಷಗಳ ನಂತರ ಈಗ ಅಲ್ಲಿ ನೂರಕ್ಕೆ ಒಂಭತ್ತ ರಷ್ಟು ಜನರು ೬೫ ವರ್ಷ ಮೀರಿದ ವೃದ್ಧರಿದ್ದಾರೆ. ಇವರಲ್ಲಿ ಹೆಚ್ಚಿನವರು ಬೇರೆಯವರ ಮೇಲೆ ಅವಲಂಬಿಸಿಕೊಳ್ಳಬೇಕಾದ ಪರಿಸ್ಥಿತಿ ಬಂದಿದೆ. ಆದುದರಿಂದ ಅಲ್ಲಿ ವೃದ್ಧರನ್ನು ನೋಡಿ ಕೊಳ್ಳಲು ಹೊಸ ಏರ್ಪಾಟುಗಳು ಹುಟ್ಟಿಕೊಂಡಿವೆ. ಆದರೂ ಜಪಾನಿಯರು ತಮ್ಮ ಹಿರಿಯರನ್ನು ಪೂರ್ಣವಾಗಿ ದೂರ ಇಡು

ಪದಿಲ್ಲ. ತಂದೆತಾಯಿಗಳಲ್ಲಿ ಹೆಚ್ಚಿನವರು ಈಗಲೂ ತಮ್ಮ ಮಕ್ಕಳ ಮನೆಯಲ್ಲಿಯೇ ಇರುತ್ತಾರೆ. ವೃದ್ಧರಿಗೆ ಪಿಂಚಣಿ, ವೃದ್ಧಾಪ್ಯ ವೇತನ ಮೊದಲಾದ ಸವಲತ್ತುಗಳು ಲಭ್ಯ ಇವೆ.

## ಅಧ್ಯಾಯ ೩

# ಭಾರತದಲ್ಲಿ ವೃದ್ಧರ ರಕ್ಷಣೆ

ಭಾರತದಲ್ಲಿ ಹಿರಿಯರನ್ನು ಗೌರವಿಸುವ ದೀರ್ಘ ಸಂಪ್ರದಾಯವಿದೆ. ತಂದೆ, ತಾಯಿ ಮತ್ತು ಗುರುಗಳು ದೇವರಿಗೆ ಸಮಾನ ಎಂಬುದು ನಮ್ಮ ಜನರ ಭಾವನೆ. ವಯಸ್ಸಿಗೆ ಮನ್ನಣೆ ಕೊಡುವದು ಬಹಳ ದಿನಗಳಿಂದ ನಡೆದು ಬಂದಿದೆ. ಅನಾಥರಾದ ಬಾಲಕರನ್ನು, ರೋಗಪೀಡಿತರನ್ನು, ಅನಾಥಳಾದ ಬಂಜೆಯರನ್ನು ಮತ್ತು ವೃದ್ಧರನ್ನು ರಾಜನು ಪಾಲಿಸಬೇಕು ಎಂದು ನಮ್ಮ ಪ್ರಾಚೀನ ಶಾಸ್ತ್ರಕಾರನಾದ ಕೌಟಿಲ್ಯನು ಹೇಳಿದ್ದಾನೆ. ತಂದೆತಾಯಿಗಳನ್ನು ಅಥವಾ ಕುಟುಂಬದಲ್ಲಿರುವ ವಿಧವೆಯರನ್ನು ಕಾಪಾಡದೆ ಇರುವ ಮಕ್ಕಳಿಗೆ ಗ್ರಾಮದ ಹಿರಿಯರು ದಂಡ ವಿಧಿಸಬೇಕು ಎಂಬ ಕಟ್ಟಳೆ ನಮ್ಮಲ್ಲಿತ್ತು. ಇಂಥ ದೇಶದಲ್ಲಿ ವೃದ್ಧರನ್ನು ಸಾಕುವದು ಕಷ್ಟವಾಗಬಾರದು.

ಆದರೆ ದುರ್ದೈವದಿಂದ ಜಗತ್ತಿನ ಬೇರೆ ಕಡೆಗಳಲ್ಲಿ ಆದಂತೆ ನಮ್ಮಲ್ಲಿಯೂ ಬದಲಾವಣೆಗಳು ಆಗುತ್ತಿವೆ. ಹಳೆಯ ರೀತಿಯ ಕುಟುಂಬಗಳು ಕ್ಷೀಣವಾಗಿವೆ. ವೃದ್ಧರ ಸಂಖ್ಯೆಯೂ ಒಂದೇ ಸಮನೆ ಏರುತ್ತ ಹೋಗಿದೆ. ೧೯೩೧ರ ಜನಗಣತಿಯ

ಪ್ರಕಾರ ನಮ್ಮ ಜನಸಂಖ್ಯೆಯಲ್ಲಿ ಅರುವತ್ತು ವರ್ಷ ವಯಸ್ಸು ಮೀರಿದ ಜನರು ನೂರರಲ್ಲಿ ಇಬ್ಬರು ಮಾತ್ರ ಇದ್ದರು. ಆದರೆ ೧೯೭೧ರಲ್ಲಿ ನೂರಕ್ಕೆ ಆರು ಮಂದಿ ಅರುವತ್ತು ವಯಸ್ಸು ಮೀರಿದ ವೃದ್ಧರಿದ್ದರು. ಸದ್ಯ ಈ ಪ್ರಮಾಣ ನೂರಕ್ಕೆ ಏಳನ್ನು ಸಮೀಪಿಸಿದೆ. ಕ್ರಿ. ಶ. ೨೦೦೦ ರ ಹೊತ್ತಿಗೆ ಅದು ಆರು ಕೋಟಿಯನ್ನು ತಲುಪಬಹುದು. ಇಷ್ಟು ಮಂದಿ ಮುದುಕರನ್ನು ಸಾಕುವುದು ತಲೆಭಾರ ಎಂಬ ಭಾವನೆ ನಿಧಾನವಾಗಿ ಬೆಳೆಯುತ್ತಿದೆ. ಇಂಥ ಸಂದರ್ಭದಲ್ಲಿ ವೃದ್ಧರಿಗೆ ರಕ್ಷಣೆ ಕೊಡುವ ಕೆಲವು ಪ್ರಯತ್ನಗಳು ನಡೆದಿವೆ.

ಪ್ರಾರಂಭದಲ್ಲಿ ಇಂಥ ಪ್ರಯತ್ನ ಮಾಡಿದವರು ಕ್ರಿಸ್ತೀಯ ಮಿಶನರಿಗಳು. ಬೆಂಗಳೂರಿನ "ಫ್ರೆಂಡ್ ಇನ್ ನೀಡ್ ಸೊಸೈಟಿ"ಯು ವೃದ್ಧರ ಮನೆಯನ್ನು ಸ್ಥಾಪಿಸಿದ ಮೊದಲ ಸಂಸ್ಥೆ. ಅದು ೧೮೩೦ರಲ್ಲಿ ಪ್ರಾರಂಭವಾಯಿತು. ಇಲ್ಲಿ ೬೦ ವರ್ಷ ದಾಟಿದ ಅಶಕ್ತರು ಹಾಗೂ ನಿರ್ಗತಿಕರಿಗೆ ಆಶ್ರಯ ಕೊಡುತ್ತಾರೆ. ಇಲ್ಲಿಯ ಕಾಬ್ ಹೋಮ್ ಎನೆಕ್ಸ ವಿಭಾಗದಲ್ಲಿ ಆರ್ಥಿಕ ಅನುಕೂಲವುಳ್ಳ ವೃದ್ಧರು ಪ್ರವೇಶ ಪಡೆಯುತ್ತಾರೆ. ಪ್ರತಿ ತಿಂಗಳು ತಮ್ಮ ನಿರ್ವಹಣೆಗೆಂದು ಹಣ ಕೊಡುತ್ತಾರೆ. "ಡೇವಿಡ್ ಸಸೂನ ಇನ್‌ಫರ್ಮ್ ಅಸೈಲಮ್" ಈ ಕ್ಷೇತ್ರವನ್ನು ಪ್ರವೇಶಿಸಿದ ಎರಡನೆಯ ಸಂಸ್ಥೆ. ಇದು ೧೮೬೫ರಲ್ಲಿ ಪುಣೆಯಲ್ಲಿ ಸ್ಥಾಪಿತವಾಯಿತು. ಇವೆಲ್ಲಕ್ಕಿಂತ ಹೆಚ್ಚು ಕೆಲಸ ಮಾಡಿದ ಸಂಸ್ಥೆಯೆಂದರೆ "ಲಿಟಲ್ ಸಿಸ್ಟರ್ಸ್ ಆಫ್ ದಿ ಪೂರ್" (ಬಡವರ ಕಿರಿಯ ಸಹೋದರಿಯರು) ಎಂಬ ಸಂಘಟನೆ. ಇದನ್ನು ೧೮೩೯ರಲ್ಲಿ ಒಬ್ಬ ಫ್ರೆಂಚ್ ಗ್ರಾಮೀಣ ಹೆಣ್ಣುಮಗಳು ಸ್ಥಾಪಿಸಿದಳು. ಈ

ಸಂಸ್ಥೆಯು ಈಗ ನೂರು ವರ್ಷಗಳಿಗೂ ಹಿಂದೆ—ಅಂದ
೧೮೮೭ರಲ್ಲಿ—ಕಲಕತ್ತೆಯಲ್ಲಿ ವೃದ್ಧರಿಗಾಗಿ ಒಂದು ವೃದ್ಧಾಶ್ರಮ
ವನ್ನು ಸ್ಥಾಪಿಸಿತು. ಇವರೇ ಸ್ಥಾಪಿಸಿದ ಇಂಥ ಹನ್ನೊಂದು
ಆಶ್ರಮಗಳು ಈಗ ಮದ್ರಾಸು, ಸಿಕಂದರಾಬಾದು, ಗುಂಟೂರು
ಮತ್ತು ಇತರ ಕಡೆಗಳಲ್ಲಿ ಇವೆ. ಇವುಗಳಲ್ಲಿ ಒಂದು ಬೆಂಗಳೂ
ನಲ್ಲಿ ಇದೆ. ಬೇರೆ ಕೆಲವು ಕ್ರಿಸ್ತೀಯ ಮಿಶನರಿಗಳು ಅಲ್ಪ ಸ್ವಲ
ಕೆಲಸ ಮಾಡಿದ್ದಾರೆ. ಇವುಗಳಲ್ಲಿ ಬಹುತೇಕ ಆಶ್ರಮಗಳು ಎಲ್ಲ
ಧರ್ಮಗಳ ವೃದ್ಧರಿಗೂ ಮುಕ್ತವಾಗಿವೆ. ಪಾರ್ಸೀ ಜನರ
ಮತ್ತು ಆಂಗ್ಲೋ ಇಂಡಿಯನ್ನರು ನಡೆಸುವ ಕೆಲವು ವೃದ್ಧ
ಮನೆಗಳು ಮುಂಬಯಿ, ಪೂನಾ ಮತ್ತು ಇತರ ಕಡೆಗಳಲ್ಲಿ ಇವೆ
ಇವುಗಳಲ್ಲಿ ಹೆಚ್ಚಾಗಿ ಹೊರಗಿನ ಸಮುದಾಯಗಳಿಗೆ ಸೇರಿ
ಜನರಿಗೆ ಪ್ರವೇಶವಿಲ್ಲ. ಹಾಗೆಯೇ ಹಿಂದೂ ಮತ್ತು ಮುಸಲ್
ನರು ನಡೆಸುವ ಕೆಲವು ಧರ್ಮಶಾಲೆಗಳು ಅಲ್ಲಲ್ಲಿ ಕಂಡು ಬರು
ತ್ತವೆ. ಈ ಎಲ್ಲ ಸಂಸ್ಥೆಗಳನ್ನು ಲೆಕ್ಕಕ್ಕೆ ಹಿಡಿದರೆ ಇಡೀ ದೇ
ದಲ್ಲಿ ಹೆಚ್ಚೆಂದರೆ ನೂರು ನೂರೈವತ್ತು ವೃದ್ಧರ ಮನೆಗಳಿವ
ಇವುಗಳಲ್ಲಿ ಕೇವಲ ಐದಾರು ಸಾವಿರ ಜನರಿಗೆ ಮಾತ್ರ ಆಶ್ರಯ
ಸಿಗುತ್ತದೆ.

ಅಖಿಲ ಭಾರತ ಮಟ್ಟದಲ್ಲಿ ವೃದ್ಧರಿಗೆ ಸಹಾಯನೀಡು
ಸಂಸ್ಥೆಯೊಂದು ಪ್ರಾರಂಭವಾಗಿದೆ. ಅದರ ಹೆಸರು 'ಹೆಲ್ಪೇಜ
ಇಂಡಿಯಾ'(Help Age India). ಅದು ಈಗಾಗಲೇ ಎರಡ
ಕೋಟಿ ರೂಪಾಯಿ ನಿಧಿ ಸಂಗ್ರಹಿಸಿದೆ. ಈ ಹಣದಿಂದ ಅದ
ಖಾಸಗಿ ಸ್ವಯಂಸೇವಾ ಸಂಸ್ಥೆಗಳಿಗೆ ವೃದ್ಧರ ಗೃಹಗಳ ನಿರ್ಮಾ
ಣಕ್ಕೆ ಸಹಾಯಧನ ಕೊಡುತ್ತದೆ. ಅವರಿಗಾಗಿ ಸಂಚಾರಿ ಆಸ್ಪತ್ರೆ

ಕ್ಯಾನ್ಸರ್ ವಾರ್ಡ, ಅಂಧರ ಶುಶ್ರೂಷಾಕೇಂದ್ರ, ಅಂಗವಿಕಲ ವೃದ್ಧರ ಪುನರ್ವಸತಿ, ವೃದ್ಧರ ಕಲ್ಯಾಣಕ್ಕಾಗಿ ಸರಕಾರ ಯೋಜಿಸಿದ ಕಾರ್ಯಕ್ರಮಗಳಿಗೆ ಬೆಂಬಲ-ಇವೆಲ್ಲ **Help Age** ಸಂಸ್ಥೆ ಮಾಡುವ ಕೆಲಸಗಳು.

ನಮ್ಮ ದೇಶದಲ್ಲಿ ನಿರ್ಗತಿಕರ ಸದನಗಳೆಂಬ ಸಂಸ್ಥೆಗಳೂ ಉಂಟು. ಇವುಗಳನ್ನು ಸರಕಾರವೇ ನಡೆಸುತ್ತದೆ ಅಥವಾ ಸರಕಾರದ ಸಹಾಯಧನ ಪಡೆಯುವ ಖಾಸಗೀ ಸಂಸ್ಥೆಗಳು ನಡೆಸುತ್ತವೆ. ಇಂಥ ನಿರ್ಗತಿಕರ ಸದನಗಳಲ್ಲಿ ಅನಾಥರಾದ ವೃದ್ಧರಿಗೂ ಆಶ್ರಯ ಉಂಟು. ಇಲ್ಲಿ ಹೆಚ್ಚಿನ ಸೌಕರ್ಯಗಳಿಲ್ಲ. ಪುಕ್ಕಟೆ ವಸತಿ ಮತ್ತು ದಿನಕ್ಕೆ ಎರಡು ಊಟ ಮಾತ್ರ ಸಿಗುತ್ತದೆ. ಇಲ್ಲಿ ದಿಕ್ಕಿಲ್ಲದ ಬಡುವರು ಬಂದು ಸೇರಿಕೊಳ್ಳುತ್ತಾರೆ. ಇಂಥ ಸಂಸ್ಥೆಗಳು ಬೆರಳಿನ ಮೇಲೆ ಎಣಿಸುವಷ್ಟು ಕಡಿಮೆ ಸಂಖ್ಯೆಯಲ್ಲಿ ಇವೆ.

ಭಾರತದಲ್ಲಿ ವೃದ್ಧರಿಗೆ ಇನ್ನೊಂದು ಬಗೆಯ ನೆರವು ಸಿಗುತ್ತದೆ. ಇದು ಎಲ್ಲರಿಗೂ ಸಿಗುವದಿಲ್ಲ. ಕೇವಲ ಸರಕಾರೀ ನೌಕರರು ಅಥವಾ ಅರೆ ಸರಕಾರಿ ನೌಕರರು ಇದರ ಲಾಭ ಪಡೆಯುತ್ತಾರೆ. ಇದನ್ನು ಪಿಂಚಣಿ (ಪೆನ್ಶನ್)ಯೋಜನೆ ಎಂದು ಕರೆಯಬಹುದು. ಸರಕಾರವು ತನ್ನ ನೌಕರರಿಗೆ ಅವರ ನಿವೃತ್ತಿಯ ನಂತರ ನಿಗದಿ ಪಡಿಸಿದ ದರದಲ್ಲಿ ಪ್ರತಿ ತಿಂಗಳು ಪಿಂಚಣಿ ಕೊಡುತ್ತದೆ.

ಇಂಥ ಇನ್ನೊಂದು ಯೋಜನೆಯೆಂದರೆ ಕ್ಷೇಮನಿಧಿ (ಪ್ರೊವಿಡೆಂಟ್ ಫಂಡ್) ಯೋಜನೆ. ಬ್ಯಾಂಕುಗಳು, ಸರಕಾರಿ

ಉದ್ದಿಮೆಗಳು, ಕಾರ್ಪೊರೇಷನ್‌ಗಳು, ಜೀವವಿಮಾ ನಿಗಮ, ಇಪ್ಪತ್ತಕ್ಕಿಂತ ಹೆಚ್ಚು ಜನ ಕೆಲಸಗಾರರು ಇರುವ ಎಲ್ಲ ವಾಣಿಜ್ಯ ಸಂಸ್ಥೆಗಳು ಮತ್ತು ಖಾಸಗೀ ಸಂಘ ಸಂಸ್ಥೆಗಳು ಸರಕಾರವು ಕೊಡುವಂಥ ಪಿಂಚಣಿಯನ್ನು ಕೊಡುವದಿಲ್ಲ. ಅದರ ಬದಲಿಗೆ ನೌಕರರಿಗೆ ಕ್ಷೇಮನಿಧಿಯನ್ನು ಕೊಡುತ್ತವೆ. ಈ ನಿಧಿಗೆ ನೌಕರರು ಮತ್ತು ಮಾಲಿಕರು ಸರಿಸಮನಾಗಿ ವಂತಿಗೆ ಕೊಡುತ್ತಾರೆ. ನೌಕರರು ತಮ್ಮ ನಿವೃತ್ತಿಯ ನಂತರ ಕ್ಷೇಮನಿಧಿಯನ್ನು ಪಡೆಯುತ್ತಾರೆ.

ನಾವು ಇಲ್ಲಿ ನೆನಪಿಡಬೇಕಾದ ಮಾತೆಂದರೆ ಈ ಯೋಜನೆಗಳು ಕೆಲವು ಲಕ್ಷ ಜನರಿಗೆ ಮಾತ್ರ ಅನ್ವಯವಾಗುತ್ತವೆ. ಕೋಟಿಗಟ್ಟಲೆ ಸಂಖ್ಯೆಯಲ್ಲಿರುವ ಬೇಸಾಯಗಾರರು, ಬೇಸಾಯ ಕೂಲಿಕಾರರು, ಕಟ್ಟಡ ಕೆಲಸ ಮಾಡುವವರು ಮತ್ತು ಇತರ ಕೆಲಸಗಾರರಿಗೆ ಇವುಗಳಿಂದ ಲಾಭವಿಲ್ಲ.

ನಮ್ಮ ದೇಶದಲ್ಲಿ ವೃದ್ಧರಿಗೆ ಕೊಡುವ ಅನೇಕ ರೀತಿಯ ಸಹಾಯಗಳಲ್ಲಿ ವೃದ್ಧಾಪ್ಯ ವೇತನ (ಓಲ್ಡ ಏಜ್ ಪೆನ್ಶನ್) ಮುಖ್ಯವಾದದ್ದು. ಇದು ಅರುವತ್ತರ ದಶಕದಲ್ಲಿ ಪ್ರಾರಂಭವಾಯಿತು. ಇದನ್ನು ಜಾರಿಗೊಳಿಸಿದ ಮೊದಲ ರಾಜ್ಯ ಉತ್ತರ ಪ್ರದೇಶ. ಅಲ್ಲಿ ಅರುವತ್ತೈದು ವಯಸ್ಸು ತುಂಬಿದ ನಿರ್ಗತಿಕ ಮುದುಕರಿಗೆ ವೃದ್ಧಾಪ್ಯ ವೇತನ ಉಂಟು. ಮುಂದೆ ಪಶ್ಚಿಮ ಬಂಗಾಳ, ರಾಜಸ್ಥಾನ, ಕೇರಳ, ಪಂಜಾಬ, ಕರ್ನಾಟಕ ಮುಂತಾದ ರಾಜ್ಯಗಳು ಈ ಯೋಜನೆಯನ್ನು ಜಾರಿಗೆ ತಂದವು. ಕರ್ನಾಟಕವು ೧೯೬೫ ಜನವರಿಯಲ್ಲಿ ಇದನ್ನು ಜಾರಿಗೆ ತಂದಿತು.

ವೃದ್ಧಾಪ್ಯ ವೇತನವು ಸರಕಾರವೇ ತನ್ನ ಖಜಾನೆಯಿಂದ ಕೊಡುವ ಸಹಾಯ. ಇದಕ್ಕೆ ವೃದ್ಧರು ವಂತಿಗೆ ಕೊಡ ಬೇಕಾಗಿಲ್ಲ.

ವೃದ್ಧಾಪ್ಯ ವೇತನ ಯೋಜನೆಯು ನಿರ್ಗತಿಕರಾದ ವೃದ್ಧರಿಗೆ ಒಂದು ವರದಾನದಂತೆ ಬಂದಿದೆ. ಕುಟುಂಬದ ರಕ್ಷಣೆ ಇಲ್ಲದೇ ಬೀದಿ ಪಾಲಾದ ಮುದುಕರು ಈ ನಗದು ಸಹಾಯ ದಿಂದ ಬದುಕಿಕೊಳ್ಳಬಹುದು. ಆದರೆ ಇಲ್ಲಿ ಒಂದೆರಡು ಮಾತುಗಳನ್ನು ಹೇಳಲೇಬೇಕು. ಸರಕಾರ ಕೊಡುವ ಸಹಾಯವು ಯಾವುದಕ್ಕೂ ಸಾಲದಷ್ಟು ಸಣ್ಣದು. ಉದಾಹರಣೆಗೆ, ಪಶ್ಚಿಮ ಬಂಗಾಳದಲ್ಲಿ ಹಳ್ಳಿಗಳಲ್ಲಿರುವ ಮುದುಕರಿಗೆ ತಿಂಗಳಿಗೆ ಕೇವಲ ಹನ್ನೆರಡು ರೂಪಾಯಿ ಸಿಗುತ್ತದೆ. ನಗರದ ಮುದುಕರಿಗೆ ಹದಿನೈದು ರೂಪಾಯಿ ಕೊಡುತ್ತಾರೆ. ಕರ್ನಾಟಕದಲ್ಲಿಯೂ ಮೊದಲು ಮಾಸಿಕ ಸಹಾಯವು ಕೇವಲ ಹದಿನೈದು ರೂಪಾಯಿ ಇತ್ತು. ಸದ್ಯ ಇದನ್ನು ಐವತ್ತು ರೂಪಾಯಿಗಳಿಗೆ ಏರಿಸಿದ್ದಾರೆ. ಈ ಸಹಾಯದಿಂದ ಜೀವನ ನಡೆಸುವುದು ಎಷ್ಟು ಕಷ್ಟ ಎಂಬುದು ಎಲ್ಲರಿಗೂ ಗೊತ್ತಿರುವ ಮಾತು.

ಈ ಯೋಜನೆಯ ಇನ್ನೊಂದು ದೋಷವೆಂದರೆ ಬಹುತೇಕ ರಾಜ್ಯಗಳಲ್ಲಿ ವೃದ್ಧಾಪ್ಯ ವೇತನ ಪಡೆಯುವ ವಯಸ್ಸು ೭೦ ಎಂದು ಇತ್ತು. ಇದನ್ನು ಅರುವತ್ತಕ್ಕೆ ಇಳಿಸುವದು ಯೋಗ್ಯ ಎಂದು ಸರಕಾರಗಳಿಗೆ ಗೊತ್ತಿದೆ. ಆದರೆ ಹಾಗೆ ಮಾಡುವದರಿಂದ ಅನೇಕ ಕೋಟಿ ರೂಪಾಯಿಗಳ ಖರ್ಚು ಬರುತ್ತದೆ. ಆದುದರಿಂದ ಸರಕಾರಗಳು ಸಹಾಯ ಪಡೆಯುವ

ವಯೋಮಿತಿಯನ್ನು ಇಳಿಸಲು ಹೆದರುತ್ತವೆ. ಕರ್ನಾಟಕವು ಸದ್ಯ ೬೫ ವರ್ಷ ತುಂಬಿದ ಜನರಿಗೆ ವೃದ್ಧಾಪ್ಯ ವೇತನ ಕೊಡುತ್ತಿದೆ.

### ಅಧ್ಯಾಯ ೪

## ಕರ್ನಾಟಕದಲ್ಲಿ ವೃದ್ಧರ ರಕ್ಷಣೆ

ಕರ್ನಾಟಕದಲ್ಲಿ ೧೯೮೧ರ ಜನಗಣತಿಯಂತೆ ಸುಮಾರು ೧೮ ಲಕ್ಷ ಮಂದಿ ಅರುವತ್ತು ವಯಸ್ಸನ್ನು ದಾಟಿದ ಮುದುಕರಿದ್ದರು. ಅವರ ಸಂಖ್ಯೆ ಈಗ ಸುಮಾರು ಇಪ್ಪತ್ತೆರಡು ಲಕ್ಷ ಇದೆ ಎಂದು ಅಂದಾಜು ಮಾಡಲಾಗಿದೆ.

ಆಧುನಿಕ ಕಾಲದಲ್ಲಿ ಕರ್ನಾಟಕದಲ್ಲಿ ವೃದ್ಧರ ರಕ್ಷಣೆಯು ಬೇರೆ ರಾಜ್ಯಗಳಿಗಿಂತ ಬಹಳ ಮೊದಲು ಪ್ರಾರಂಭವಾಯಿತು. ೧೯೩೦ರಷ್ಟು ಹಿಂದೆ ಬೆಂಗಳೂರಿನಲ್ಲಿ 'ಫ್ರೆಂಡ್ ಇನ್ ನೀಡ್ ಸೊಸೈಟಿ'ಯು ಒಂದು ವೃದ್ಧರ ಮನೆಯನ್ನು ಸ್ಥಾಪಿಸಿತು. ಇದು ಭಾರತದಲ್ಲಿಯೇ ಮೊಟ್ಟ ಮೊದಲನೆಯ ವೃದ್ಧರ ಮನೆ. ಇದು ಕರ್ನಲ್ ಹಿಲ್ ರಸ್ತೆಯ ಮೇಲಿದೆ. ಇಲ್ಲಿ ಆಶ್ರಯ ಪಡೆಯುವವರು ತಮ್ಮ ಊಟ, ವಸತಿ, ಉಪಚಾರಗಳ ಸಲುವಾಗಿ ಹಣ ಕೊಡಬೇಕಾಗುತ್ತದೆ. ಇನ್ನೊಂದು ಹಳೆಯ ಸಂಸ್ಥೆಯೆಂದರೆ 'ಲಿಟಲ್ ಸಿಸ್ಟರ್ಸ್ ಆಫ್ ಪೂರ್' ಎಂಬ ಸಂಸ್ಥೆ. ಈ ಸಂಸ್ಥೆಯು ಭಾರತದ ಬೇರೆ ಬೇರೆ ಕಡೆಗಳಲ್ಲಿ ಹನ್ನೊಂದು ವೃದ್ಧಾಶ್ರಮಗಳನ್ನು ನಡೆಸುತ್ತಿದೆ. ಅಲ್ಲದೇ ಇತರ ಮೂವತ್ತು ದೇಶಗಳಲ್ಲಿ ಇಂಥ ೩೦೫ ಆಶ್ರಮಗಳನ್ನು ನಡೆಸುತ್ತಿದೆ.

ಬೆಂಗಳೂರಿನ ಹೊಸೂರು ರಸ್ತೆಯಲ್ಲಿರುವ ವೃದ್ಧಾಶ್ರಮವು ೧೯೦೦ರಲ್ಲಿ ಪ್ರಾರಂಭವಾಯಿತು. ಇಲ್ಲಿ ಈಗ ಸುಮಾರು ೨೦೦ ಮಂದಿ ವೃದ್ಧ ಸ್ತ್ರೀ ಪುರುಷರಿಗೆ ಆಶ್ರಯ ಕೊಡಲಾಗಿದೆ. ಇವರೆಲ್ಲರೂ ಬಡವರು, ನಿರ್ಗತಿಕರು ಮತ್ತು ಅಂಗವಿಕಲರು. ಇಲ್ಲಿ ಜಾತಿ, ಮತ, ಧರ್ಮಗಳ ಭೇದವಿಲ್ಲ. ಈ ಆಶ್ರಮವನ್ನು ನಡೆಸುವ ಕ್ರಿಸ್ತೀಯ ಸಹೋದರಿಯರು ವಾರಕ್ಕೆರಡು ಬಾರಿ ಸಿಟಿ ಮಾರ್ಕೆಟ ಮತ್ತು ಮಂಡಿಗಳಿಗೆ ಹೋಗಿ ತರಕಾರಿ, ಬೇಳೆ ಕಾಳು, ನಗದು ಇತಾದಿಗಳನ್ನು ಸಂಗ್ರಹಿಸಿ ತರುತ್ತಾರೆ. ಹೊರಗಿನವರ ಸಹಾಯವೂ ಆಗೀಗ ಬರುತ್ತದೆ.

ಬಡವರಿಗೆ ಆಶ್ರಯ ಕೊಡುವ ಮತ್ತೊಂದು ಸಂಸ್ಥೆಯೆಂದರೆ "ಅಶಕ್ತ ಪೋಷಕ ಸಭೆ". ಇದರ ವಸತಿಗೃಹವು ಸದ್ಯ ಸುಮಾರು ೬೦ ಸ್ತ್ರೀ ಪುರುಷರಿಗೆ ಆಶ್ರಯ ಕೊಡುತ್ತಿದೆ. ಜಾತಿ, ಮತ, ಧರ್ಮಗಳ ಭೇದವಿಲ್ಲದೇ ನಿರ್ಗತಿಕರಿಗೆ ಇಲ್ಲಿ ಪ್ರವೇಶವಿದೆ. ಇದಕ್ಕೆ ಬೆಂಗಳೂರು ನಗರಸಭೆಯು ಹೆಸರಿಗೆ ಮಾತ್ರ ಒಂದು ಚಿಕ್ಕ ಸಹಾಯಧನ ಕೊಡುತ್ತಿದೆ. ಉಳಿದ ಖರ್ಚಿಗಾಗಿ ದಾನಿಗಳಿಂದ ಹಣ ಸಂಗ್ರಹಿಸುತ್ತಾರೆ.

ಬೆಂಗಳೂರಿನಲ್ಲಿರುವ ಇನ್ನೂ ಕೆಲವು ವೃದ್ಧಾಶ್ರಮಗಳ ಪರಿಚಯ ಮಾಡಿಕೊಳ್ಳೋಣ. ರೆಸಿಡೆನ್ಸಿ ರೋಡಿನಲ್ಲಿ 'ಸೀನಿಯರ್ ಸಿಟಿಝನ್ಸ್ ಹೋಮ್' ಇದೆ. ಈಗ ಇಲ್ಲಿ ಆಶ್ರಯ ಪಡೆದವರು ಕೇವಲ ೨೩ ಮಂದಿ. ಇವರೆಲ್ಲ ತಲಾ ರೂ. ೨೦,೦೦೦ ಠೇವಣಿ ಕೊಟ್ಟು ಒಳಗೆ ಬಂದಿರುತ್ತಾರೆ. ಇವರು ತಮ್ಮ ಊಟ, ವಸತಿ, ಆರೈಕೆಗಳಿಗಾಗಿ ಪ್ರತಿ ತಿಂಗಳು

ಸುಮಾರು ೫೫೦ ರೂಪಾಯಿಗಳನ್ನು ಆಶ್ರಮಕ್ಕೆ ಕೊಡುತ್ತಾರೆ. ಈ ಸಂಸ್ಥೆಯು ಶ್ರೀಮಂತರಿಗಾಗಿ ಇದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ಇನ್ನೊಂದು ಸಂಸ್ಥೆ 'ಈವನ್ ಟ್ರೈಡ್ ಹೋಮ್.' ಇಲ್ಲಿ ಕೇವಲ ಇಪ್ಪತ್ತು ಜನರಿಗೆ ಆಶ್ರಯುವಿದೆ. ಪ್ರತಿಯೊಬ್ಬರೂ ತಿಂಗಳಿಗೆ ೨೦೦ ರೂಪಾಯಿ ಕೊಡಬೇಕು. ಹೆಣ್ಣು ಮಕ್ಕಳಿಗೆ ಮಾತ್ರ ಪ್ರವೇಶ ನೀಡುವ 'ವೆಸ್ಲಿ ಹೋಮ್' ಎಂಬ ಆಶ್ರಮ ಮಿಲ್ಲರ್ ರಸ್ತೆಯಲ್ಲಿದೆ. ಇದರಲ್ಲಿ ಸದ್ಯ ಕೇವಲ ಏಳು ಮಂದಿ ಆಶ್ರಯ ಪಡೆದಿದ್ದಾರೆ. ತಿಂಗಳಿಗೆ ಇವರು ನೂರೈವತ್ತು ರೂಪಾಯಿ ಕೊಡುತ್ತಾರೆ. ಪ್ರೊಟೆಸ್ಟಂಟ್ ಜನರು, ಯುರೋಪಿಯನ್ನರು ಮತ್ತು ಆಂಗ್ಲೋ ಇಂಡಿಯನ್ನರಿಗೆ ಮಾತ್ರ ಇಲ್ಲಿ ಪ್ರವೇಶವಿದೆ. ಎಚ್. ಎ. ಎಲ್. ರಸ್ತೆಯಲ್ಲಿರುವ 'ಜೆಶಾಯರ್ ಹೋಮ್' ಇಂಥದೇ ಇನ್ನೊಂದು ಸಂಸ್ಥೆ.

ನಾವು ನೋಡಿದ ಈ ಎಲ್ಲ ಸಂಸ್ಥೆಗಳು ಬಹಳೆಂದರೆ ಹತ್ತಿಪ್ಪತ್ತು ಜನರಿಗೆ ಮಾತ್ರ ಆಶ್ರಯ ಕೊಡಬಲ್ಲವು. ಇವು ಹೆಚ್ಚಾಗಿ ಕುಟುಂಬದ ಆಶ್ರಯುವಿಲ್ಲದ ಅಥವಾ ಕುಟುಂಬದಿಂದ ದೂರ ಇರಲು ಬಯಸುವ ಶ್ರೀಮಂತ ಮುದುಕರಿಗೆ ಅನುಕೂಲವಾಗಿವೆ.

ಬೆಂಗಳೂರಿನ ಹೊರಗೂ ಬೆರಳಿನ ಮೇಲೆ ಎಣಿಸುವಷ್ಟು ವೃದ್ಧರ ಗೃಹಗಳಿವೆ. ಉದಾಹರಣೆಗೆ ಮೈಸೂರಿನ ಶಂಕರ ಮಠದ ಹತ್ತಿರದಲ್ಲಿರುವ 'ಭಾರತೀಯ ವೃದ್ಧ ಆಶ್ರಮ'ದ ಹೆಸರನ್ನು ಹೇಳಬಹುದು. ಶೃಂಗೇರಿ ಮಠದ ಆವರಣದಲ್ಲಿರುವ ಈ ವೃದ್ಧಾಶ್ರಮದಲ್ಲಿ ಸದ್ಯ ಬ್ರಾಹ್ಮಣ ವಿಧವೆಯರೇ ಆಶ್ರಯ

ಪಡೆದಿದ್ದಾರೆ. ಇದನ್ನು ವಿಸ್ತರಿಸಿ ಎಲ್ಲ ನಿರ್ಗತಿಕ ಜನರಿಗೆ ಮುಕ್ತ ಮಾಡುವ ಯೋಜನೆ ಇದೆ. ನಾವು ಈಗಾಗಲೇ ಪ್ರಸ್ತಾಪ ಮಾಡಿದ, 'ಲಿಟಲ್ ಸಿಸ್ಟರ್ಸ್ ಆಫ್ ದಿ ಪೂರ್' ಸಂಸ್ಥೆಯವರು ಮೈಸೂರಿನಲ್ಲಿಯೂ ಒಂದು ವೃದ್ಧಾಶ್ರಮ ನಡೆಸುತ್ತಿದ್ದಾರೆ. ಬೆಂಗಳೂರಿನಲ್ಲಿನರುವ ಆಶ್ರಮದಂತೆ ಇಲ್ಲಿಯೂ ಜಾತಿ, ಮತ, ಧರ್ಮಗಳ ಭೇದವನ್ನು ಎಣಿಸದೇ ಸುಮಾರು ಇನ್ನೂರು ನಿರ್ಗತಿಕ ವೃದ್ಧರಿಗೆ ಆಶ್ರಯ ಸಿಕ್ಕಿದೆ. ಇತ್ತೀಚೆಗೆ ಹುಬ್ಬಳ್ಳಿ, ಬೆಂಗಳೂರು ರೈಲುದಾರಿಯಲ್ಲಿ ಹಾವೇರಿಯ ಹತ್ತಿರ ಇರುವ ಕರ್ಜಗಿ ರೈಲು ನಿಲ್ದಾಣದ ಬಳಿ ಒಂದು ವೃದ್ಧಾಶ್ರಮ ತೆರೆದಿದ್ದಾರೆ. ಸದ್ಯ ೧೫-೨೦ ಜನರಿಗೆ ಆಶ್ರಯ ಕಲ್ಪಿಸಿದ್ದಾರೆ. ಪಿಂಚಣಿದಾರರು ಪ್ರತಿತಿಂಗಳೂ ಸುಮಾರು ರೂ. ೧೫೦ ಕೊಡಬೇಕಾಗುತ್ತದೆ. ಮಂಗಳೂರಿನ ಹತ್ತಿರವಿರುವ ಕೋಣಾಜೆಯಲ್ಲಿ ಖಾಸಗಿ ಸಂಘಟನೆಯೊಂದು ೧೯೭೭ರಲ್ಲಿ 'ಅಭಯ ಆಶ್ರಯ' ಎಂಬ ವೃದ್ಧರ ಮತ್ತು ನಿರ್ಗತಿಕರ ಆಶ್ರಮವೊಂದನ್ನು ನಡೆಸುತ್ತಿದೆ. ಅದರ ವಿಸ್ತರಣಾ ಯೋಜನೆ ಮುಗಿದಾಗ ೨೮ ಹೆಣ್ಣುಮಕ್ಕಳನ್ನೊಳಗೊಂಡು ೧೦೦ ನಿವಾಸಿಗಳಿಗೆ ಆಶ್ರಯ ಸಿಗುತ್ತದೆ. ಅದೇ ಜಿಲ್ಲೆಯ ಕಲ್ಯಾಣಪುರದಲ್ಲಿ 'ಬಿಜನಮ್ ವೃದ್ಧರ ಗೃಹ' ಇತ್ತಿಚೆಗೆ ಪ್ರಾರಂಭವಾಗಿದೆ.

ನಾವು ಈ ವರೆಗೆ ಕರ್ನಾಟಕದಲ್ಲಿರುವ ವೃದ್ಧಾಶ್ರಮಗಳನ್ನು ಸಾಕಷ್ಟು ವಿವರವಾಗಿ ಚರ್ಚಿಸಿದ್ದೇವೆ. ಇದರಿಂದ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ, ಈ ಎಲ್ಲ ಆಶ್ರಯಗಳನ್ನು ಲೆಕ್ಕಕ್ಕೆ ಹಿಡಿದರೆ, ಒಟ್ಟು ಕೆಲವೇ ನೂರು ಜನರು ಆಶ್ರಯ ಪಡೆದಿದ್ದಾರೆ. ಎರಡನೆಯದಾಗಿ,

‘ದಿ ಲಿಟಲ್ ಸಿಸ್ಟರ್ಸ ಆಫ್ ದಿ ಪೂರ್’ ಸಂಸ್ಥೆಯನ್ನು ಬಿಟ್ಟರೆ ಉಳಿದ ಸಂಸ್ಥೆಗಳು ಬಹಳ ಚಿಕ್ಕವು. ಹಾಗೂ ಅವು ಕೆಲವು ಕೋಮಿನವರಿಗೆ ಮೀಸಲಾಗಿವೆ. ಮೂರನೆಯದಾಗಿ ಈ ಎಲ್ಲ ಆಶ್ರಮಗಳು ನಗರಗಳಲ್ಲಿಯೇ ಇವೆ. ಹಳ್ಳಿಯ ಬಡವರಿಗೆ ಇವುಗಳಿಂದ ಏನೂ ಲಾಭ ಮುಟ್ಟಿಲ್ಲ. ಕೊನೆಯದಾಗಿ, ಇವುಗಳು ಕುಟುಂಬದಷ್ಟು ಸಮರ್ಥವಾಗಿ ಆಶ್ರಯ ಮತ್ತು ಆರೈಕೆ ಕೊಡುವದು ಸಾಧ್ಯವಾಗಿಲ್ಲ.

ವೃದ್ಧರ ರಕ್ಷಣೆಯ ಬಗ್ಗೆ ವಿಚಾರ ಮಾಡುವಾಗ ನಾವು ಕರ್ನಾಟಕ ‘ಸರಕಾರಿ’ ನೌಕರರು ಪಡೆಯುವ ಪಿಂಚಣಿಯ ಪ್ರಸ್ತಾಪ ಮಾಡಬೇಕು. ಇವರು ಸದ್ಯ ೫೮ ವರ್ಷ ಪ್ರಾಯಕ್ಕೆ ನಿವೃತ್ತರಾಗುತ್ತಾರೆ. ಮೂವತ್ತು ವರ್ಷ ಸೇವೆ ಸಲ್ಲಿಸಿದ ನೌಕರನು ಅಥವಾ ೫೮ ವರ್ಷ ತುಂಬಿದ ನೌಕರನು ತನ್ನ ನಿವೃತ್ತಿಯ ನಂತರ ತನ್ನ ಮೂಲ ವೇತನದ ಅರ್ಧದಷ್ಟನ್ನು ಪ್ರತಿ ತಿಂಗಳು ಪಿಂಚಣಿಯ ರೂಪದಲ್ಲಿ ಪಡೆಯುತ್ತಾನೆ. ಎಲ್ಲ ಸರಕಾರೀ ನೌಕರರು ನಿವೃತ್ತಿಯಾಗುತ್ತಲೇ ‘ಗ್ರಾಚ್ಯುಟಿ’ ಎಂಬ ನಿಧಿಯನ್ನು ಕೂಡ ಪಡೆಯುತಾರೆ. ಶಿಕ್ಷಕರು ಮತ್ತಿತರ ನೌಕರರು ‘ತ್ರಿವಿಧ ಲಾಭ’ (ಟ್ರಿಪಲ್ ಬೆನಿಫಿಟ್) ಪಡೆಯುತ್ತಾರೆ. ಈ ಯೋಜನೆಯಂತೆ ಇವರಿಗೆ ಪಿಂಚಣಿ, ಗ್ರಾಚ್ಯುಟಿ ಮತ್ತು ವಿಮೆಯ ಲಾಭಗಳು ಸಿಗುತ್ತವೆ. ಸರಕಾರೇತರ ಸಂಸ್ಥೆಗಳಲ್ಲಿ—ಅಂದರೆ ಕಾರ್ಪೊರೇಷನ್, ವಾಣಿಜ್ಯ, ಉದ್ಯಮ ಮತ್ತು ಇತರ ಸಂಸ್ಥೆಗಳಲ್ಲಿ—ದುಡಿಯುವ ನೌಕರರು ಕ್ಷೇಮನಿಧಿ ಲಾಭವನ್ನು ಪಡೆಯುತ್ತಾರೆ. ಈ ನಿಧಿಗೆ ನೌಕರರೂ ಮಾಲಕರೂ ಸಮನಾಗಿ

ವಂತಿಗೆ ಸಲ್ಲಿಸುತ್ತಾರೆ. ಕರ್ನಾಟಕದಲ್ಲಿ ಒಂದೆರಡು ಲಕ್ಷ ವೃದ್ಧರು ಇದರ ಲಾಭ ಪಡೆಯುತ್ತಿದ್ದಾರೆ.

ಇವೆಲ್ಲಕ್ಕಿಂತ ಹೆಚ್ಚು ಜನರಿಗೆ ಭದ್ರತೆಯನ್ನು ಒದಗಿಸುವ ಕ್ರಮವೆಂದರೆ ಕರ್ನಾಟಕ ಸರಕಾರವು ಕೈಗೊಂಡ ವೃದ್ಧಾಪ್ಯ ವೇತನ ಯೋಜನೆ. ಇದು ೧೯೬೫ರ ಜನವರಿಯಿಂದ ಜಾರಿಗೆ ಬಂತು. ಆಗ ಈ ಯೋಜನೆಯಂತೆ ಯಾರೂ ದಿಕ್ಕಿಲ್ಲದ ಹಾಗೂ ಎಪ್ಪತ್ತು ವರ್ಷ ಮೀರಿದ ವೃದ್ಧರಿಗೆ ಪ್ರತಿತಿಂಗಳು ಸರಕಾರವು ಹದಿನೈದು ರೂಪಾಯಿ ವೃದ್ಧಾಪ್ಯ ವೇತನ ಕೊಡುತ್ತಿತ್ತು. ವೃದ್ಧನಿಗೆ ೨೦ ವರ್ಷ ದಾಟಿದ ಮಗ, ಮೊಮ್ಮಗಂದಿರು ಇರ ಬಾರದು. ಇದ್ದರೂ ಅವರೂ ನಿರ್ಗತಿಕರಾದರೆ ವೃದ್ಧನಿಗೆ ಪಿಂಚಣಿ ಕೊಡಬಹುದು. ಕೇವಲ ೧೦,೦೦೦ ಜನರು ಇದರ ಲಾಭ ಪಡೆಯುತ್ತಿದ್ದರು. ಮುಂದೆ ೧೯೭೨ರಲ್ಲಿ ವಯೋ ಮಿತಿಯನ್ನು ೬೫ಕ್ಕೆ ಇಳಿಸಲಾಯಿತು ಹಾಗೂ ವೃದ್ಧಾಪ್ಯ ವೇತನದ ರಕಮನ್ನು ನಲವತ್ತು ರೂಪಾಯಿಗೆ ಏರಿಸಲಾಯಿತು. ಅದನ್ನು ಮತ್ತೆ ೧-೪-೮೩ ರಿಂದ ಐವತ್ತು ರೂಪಾಯಿಗೆ ಏರಿಸಿದ್ದಾರೆ. ೧೯೭೪ ರಿಂದ ಈಚೆಗೆ ನಿಯಮಗಳನ್ನು ಧಾರಾಳ ಗೊಳಿಸಿದ್ದಾರೆ. ಕುಷ್ಠರೋಗ, ಕ್ಷಯ, ಅಸ್ತಮಾ, ಮಾನಸಿಕ ಕಾಯಿಲೆಗಳಿಂದ ಬಳಲುವ ಮುದುಕರು ಅರುವತ್ತು ವಯಸ್ಸಿ ನಲ್ಲಿಯೇ ಈ ಸಹಾಯ ಪಡೆಯಬಹುದು. ಕುರುಡರಾಗಿ ಅಥವಾ ಹೆಳವರಾಗಿ ದುಡಿಯಲು ಅಸಮರ್ಥರಾದರೆ ೪೫ ವರ್ಷಕ್ಕೆ ವೃದ್ಧಾಪ್ಯ ವೇತನ ಸಿಗುತ್ತದೆ. ಈ ಎಲ್ಲ ಬಗೆಯ ಸಹಾಯಗಳನ್ನು ಪಡೆಯುವ ನಿರ್ಗತಿಕರ ಸಂಖ್ಯೆ ಸುಮಾರು

ಮೂರೂವರೆ ಲಕ್ಷ (೧೯೮೧). ಅದರ ಕೆಲವು ವಿವರಗಳ
ಹೀಗಿವೆ :

| ವರ್ಷ | ಪಿಂಚಣಿದಾರರಸಂಖ್ಯೆ (ಡಿಸೆಂಬರ್ ೩೧) | ಪಿಂಚಣಿಗಾಗಿ ಖರ್ಚು (ಆರ್ಥಿಕವರ್ಷದಲ್ಲಿ (ಲಕ್ಷ ರೂ. ಗಳಲ್ಲಿ |
|---|---|---|
| ೧೯೭೩-೭೪ | ೪೯,೧೯೩ | ೮೯.೫೦ |
| ೧೯೭೪-೭೫ | ೬೨,೦೭೩ | ೧೫೮.೭೫ |
| ೧೯೭೫-೭೬ | ೧,೫೩,೪೩೮ | ೩೩೨.೧೨ |
| ೧೯೭೬-೭೭ | ೧,೭೯,೮೦೩ | ೬೪೭.೪೪ |
| ೧೯೭೭-೭೮ | ೨,೦೧,೮೧೧ | ೮೪೧.೦೨ |
| ೧೯೭೮-೭೯ | ೨,೬೨,೧೧೮ | ೯೨೫.೪೦ |
| ೧೯೭೯-೮೦ | ೩,೦೭,೪೫೪ | ೧,೧೮೧.೩೫ |
| ೧೯೮೦-೮೧ | ೩,೪೨,೫೯೫ | ೧,೪೬೦.೦೦ |

(ಕರ್ನಾಟಕ ಗ್ಯಾಜೆಟಿಯರ

ಕರ್ನಾಟಕದ ವೃದ್ಧಾಪ್ಯ ವೇತನ ಯೋಜನೆ ಜಾರ
ಬಂದಾಗ ಅದರ ಪರವಾಗಿ ಮತ್ತು ವಿರುದ್ಧವಾಗಿ ಅಭಿಪ್ರಾಂ
ಗಳು ಹುಟ್ಟಿಕೊಂಡವು. ಕೆಲವರು ಅದು ಆಳುವ ಸರಕಾ
ಓಟು ಪಡೆಯಲು ಮಾಡಿದ ತಂತ್ರ ಎಂದು ದೂರಿದರ
ಒಂದೆರಡು ಕಡೆ ಚುನಾವಣೆಯ ಹೊತ್ತಿಗೆ ಓಟು ಕೊಡದಿದ್ದ
ವೇತನ ರದ್ದು ಪಡಿಸುವುದಾಗಿ ಅಧಿಕಾರಿಗಳು ಹೇಳಿದ್ದು ಉಂ
ಎಂದು ವರದಿ. ಆದರೆ ಇಡೀ ಯೋಜನೆ ಓಟಿಗಾಗಿ ಹು
ಕೊಂಡಿಲ್ಲ. ಅದು ಎಲ್ಲ ಸಮಾಜವಾದಿ ಹಾಗೂ ಕಲ್ಯಾ

ರಾಜ್ಯಗಳು ಈಗ ಮಾಡಲೇಬೇಕಾದ ಕೆಲಸ. ಸರಕಾರದ ವ್ಯಾಪ್ತಿ ಬಹಳ ಇರಬಾರದು ಎಂದು ನಂಬುವೆ. ಅಮೆರಿಕೆಯ ಸಂಯುಕ್ತ ಸಂಸ್ಥಾನದಂಥ ದೇಶಗಳು ಕೂಡ ಇದನ್ನು ಹೋಲುವ ಸಾಮಾಜಿಕ ಭದ್ರತೆಯ ಯೋಜನೆಗಳನ್ನು ಹೊಂದಿವೆ.

ಈ ಯೋಜನೆಯನ್ನು ಕೆಲವರು ದುರುಪಯೋಗ ಪಡಿಸಿಕೊಂಡಿದ್ದು ನಿಜ. ಬೆಂಗಳೂರಿನಲ್ಲಿ ಇಂಥ ಹಲವು ಪ್ರಕರಣಗಳು ಬೆಳಕಿಗೆ ಬಂದಿವೆ. ಬೇರೆ ರಾಜ್ಯಗಳಿಂದ ಇಲ್ಲಿಗೆ ಕೂಲಿ ಕೆಲಸಕ್ಕೆ ಬಂದು ತಾವು ಕರ್ನಾಟಕದವರು ಎಂದು ಹೇಳಿ, ಸುಳ್ಳು ವಯಸ್ಸು ದಾಖಲೆ ಮಾಡಿ, ಹಣ ಪಡೆದವರು ಉಂಟು. ಇಂಥ ಪ್ರಕರಣಗಳನ್ನು ತನಿಖೆ ಮಾಡುವುದು ಕಷ್ಟ. ಕೆಲವೊಮ್ಮೆ ಅಧಿಕಾರಿಗಳೂ ಇದರಲ್ಲಿ ಶಾಮೀಲು ಆಗಿರಬಹುದು. ಇದನ್ನು ಗಮನಿಸಿದ ಕರ್ನಾಟಕ ಸರಕಾರವು ಈಗ ಒಂದು ಹೊಸ ನಿಬಂಧನೆ ಮಾಡಿದೆ. ಅದೇನೆಂದರೆ ಅರ್ಜಿದಾರರು ಅರ್ಜಿ ಸಲ್ಲಿಸುವ ವೇಳೆಗೆ ಕರ್ನಾಟಕ ರಾಜ್ಯದಲ್ಲಿ ಕನಿಷ್ಠ ಮೂರು ವರ್ಷಗಳ ಕಾಲ ನೆಲೆಸಿರಬೇಕು.

ವೃದ್ಧಾಪ್ಯ ವೇತನವು ಯಾವುದೇ ಆದಾಯದ ಮೂಲಗಳು ಇರದ ನಿರ್ಗತಿಕರಿಗೆ ಸಿಗಬೇಕೆಂಬುದು ಸರಕಾರದ ಇಚ್ಛೆ. ಆದುದರಿಂದ ಗಂಡನು ಅಥವಾ ಹೆಂಡತಿಯು ದುಡಿಯುತ್ತಿದ್ದರೆ ಮಕ್ಕಳು ಅಥವಾ ಮೊಮ್ಮಕ್ಕಳಿಗೆ ಆದಾಯವಿದ್ದರೆ, ಅಥವಾ ಇಪ್ಪತ್ತು ವರ್ಷ ಮೀರಿದ ಮಗ–ಮೊಮ್ಮಗ ಇದ್ದರೆ, ಅಂಥವರಿಗೆ ಈ ಸಹಾಯ ಇಲ್ಲ. ಅದೇ ರೀತಿಯಲ್ಲಿ ಅಣ್ಣ–ತಮ್ಮ–ತಂಗಿ–ಅಕ್ಕ–ಮಗಳು ಇಂಥವರಿಂದ ಕ್ರಮಬದ್ಧವಾಗಿ ಸಹಾಯ

ಪಡೆಯುವ ವೃದ್ಧರಿಗೂ ಇದು ಸಿಗುವುದಿಲ್ಲ; ಆದರೆ ಇವರು ಬಹಳ ಕಡಿಮೆ ಸಹಾಯ ಕೊಡುತ್ತಿದ್ದರೆ ತಿಂಗಳಿಗೆ ನಲವತ್ತು ರೂಪಾಯಿಗಳ ಬದಲು ಸ್ವಲ್ಪ ಕಡಿಮೆ ಸಹಾಯ ಕೊಡ ಬಹುದು. ಗಂಡ ಹೆಂಡಿರಿಬ್ಬರೂ ನಿರ್ಗತಿಕರಾಗಿದ್ದರೆ ಇಬ್ಬ ರಿಗೂ ಪ್ರತ್ಯೇಕವಾಗಿ ವೃದ್ಧಾಪ್ಯ ವೇತನ ಸಿಗುತ್ತದೆ. ಭಿಕ್ಷೆ ಬೇಡು ವುದನ್ನು ವೃತ್ತಿಯನ್ನಾಗಿ ಮಾಡಿಕೊಂಡವರಿಗೆ ಅಥವಾ ಭಿಕ್ಷೆ ಎತ್ತುತ್ತ ಊರಿಂದೂರಿಗೆ ತಿರುಗುವವರಿಗೆ ವೃದ್ಧಾಪ್ಯ ವೇತನ ಸಿಗುವುದಿಲ್ಲ. ವೃದ್ಧಾಪ್ಯ ವೇತನವನ್ನು ಹಿಂದೆ ಜಿಲ್ಲಾಧಿಕಾರಿ ಗಳೇ ಮಂಜೂರು ಮಾಡಬೇಕಾಗಿತ್ತು. ಇದು ತ್ರಾಸದಾಯಕ ವಾಗಿ ಕಂಡದ್ದರಿಂದ ೧೯೭೪ ರಿಂದ ಈ ಅಧಿಕಾರವನ್ನು ಸಹಾ ಯಕ ಜಿಲ್ಲಾಧಿಕಾರಿಗಳಿಗೆ ವರ್ಗಾಯಿಸಲಾಯಿತು. ಅಗಸ್ಟ ೧೯೭೯ ರಿಂದ ಆ ಅಧಿಕಾರವನ್ನು ಮತ್ತಷ್ಟು ವಿಕೇಂದ್ರೀಕರಿಸಿ ತಹಸೀಲದಾರರಿಗೆ ಕೊಡಲಾಗಿದೆ. ಇತ್ತೀಚೆಗೆ ತಹಸೀಲದಾರರು ಜನಸಂಪರ್ಕ ಶಿಬಿರ ಏರ್ಪಡಿಸಿದಾಗ ವೃದ್ಧರು ಅರ್ಜಿ ಸಲ್ಲಿಸಿದರೆ ಸ್ಥಳದಲ್ಲೇ ಮಂಜೂರಾತಿ ನೀಡುವುದೂ ನಡೆದಿದೆ.

ಈ ಯೋಜನೆಯಲ್ಲಿ ಅನೇಕ ಲೋಪದೋಷಗಳು ಇರ ಬಹುದು. ಕೆಲವು ಅಧಿಕಾರಿಗಳು ಅಥವಾ ದಲ್ಲಾಳಿಗಳು ಇದರ ದುರುಪಯೋಗ ಪಡೆದಿರುವುದು ಗೊತ್ತಾಗಿದೆ. ಇದೂ ಅಲ್ಲದೆ ಸರಕಾರ ಕೊಡುವ ೫೦ ರೂಪಾಯಿ ಈಗಿನ ಕಾಲದಲ್ಲಿ ಯಾವು ದಕ್ಕೂ ಸಾಲದು ಎಂಬ ದೂರು ಇದೆ. ಅದೇನೇ ಇದ್ದರೂ ಈ ಲೋಪದೋಷಗಳನ್ನು ಸರಿಪಡಿಸಬಹುದು. ಸದ್ಯ ಈ ಯೋಜನೆಗೆ ಪ್ರತಿ ವರ್ಷ ೧೬–೧೭ ಕೋಟಿ ರೂಪಾಯಿ ಖರ್ಚಾ

ಗುತ್ತಿದೆಯಂತೆ. ಹಣದ ಅನುಕೂಲವಾದರೆ ಸರಕಾರವು ವೃದ್ಧಾಪ್ಯ ವೇತನದ ಮೊತ್ತವನ್ನು ಮತ್ತೆ ಏರಿಸುವ ಯೋಜನೆಯಲ್ಲಿದೆ. ಏನಿದ್ದರೂ ಈ ಯೋಜನೆಯು ನಮ್ಮ ರಾಜ್ಯದ ಕೆಲವು ಲಕ್ಷ ಜನರಿಗಾದರೂ ಊರುಗೋಲಿನಂತೆ ಇದೆ ಎಂದರೆ ತಪ್ಪಿಲ್ಲ.

## ಅಧ್ಯಾಯ ೫

# ನಾಳೆ

ವೃದ್ಧರಿಗೆ ನಾಳೆ ಎಂಬುದು ಉಂಟೆ ? ಅಂದರೆ ಅವರಿಗೆ ಒಳ್ಳೆಯ ದಿನಗಳು ಬರಬಹುದೆ ? ಈ ಪ್ರಶ್ನೆಗೆ ಏನು ಉತ್ತರ ಹೇಳೋಣ ? ಕೆಲವರ ಅಭಿಪ್ರಾಯದಲ್ಲಿ ವೃದ್ಧರು ಇನ್ನು ಮುಂದೆ ಹೆಚ್ಚು ಹೆಚ್ಚು ಕಷ್ಟಗಳನ್ನು ಅನುಭವಿಸುತ್ತ ಹೋಗಬೇಕಾದೀತು. ಏಕೆಂದರೆ ಎಲ್ಲ ದೇಶಗಳಲ್ಲಿಯೂ ಮರಣ ಪ್ರಮಾಣ ಕುಗ್ಗುತ್ತಿದೆ. ಜನರ ಸರಾಸರಿ ಆಯುರ್ಮಾನ ಹೆಚ್ಚುತ್ತಿದೆ. ವೃದ್ಧರು ಬಹಳ ವರ್ಷಗಳ ಕಾಲ ಕೆಲಸವಿಲ್ಲದೇ ಇರಬೇಕಾಗುತ್ತದೆ. ಅಂದರೆ ಅವರು ಬೇರೆಯವರ ಮೇಲೆ ಅವಲಂಬಿಸಿಕೊಂಡಿರಬೇಕು. ಕುಟುಂಬಗಳಲ್ಲಿ ಅವರಿಗೆ ಹಿಂದಿನಂತೆ ಆಶ್ರಯ ಸಿಗುವುದಿಲ್ಲ. ಇದುವರೆಗೆ ಪಶ್ಚಿಮದ ದೇಶಗಳಲ್ಲಿ ಮಾತ್ರ ಈ ಸಮಸ್ಯೆಗಳು ಇದ್ದವು. ಈಗ ಏಷ್ಯಾ ಖಂಡದ ದೇಶಗಳಲ್ಲಿಯೂ ಕುಟುಂಬಗಳು ಬದಲಾಗುತ್ತಿವೆ. ಆದುದರಿಂದ ಈ ದೇಶಗಳಲ್ಲಿಯೂ ಮುದುಕರ ಗೋಳು ಹೆಚ್ಚುತ್ತದೆ ಎಂದು ಈ ನಿರಾಶಾವಾದಿಗಳು ಹೇಳುತ್ತಾರೆ. ಅವರು ಹೇಳುವ ಮಾತಿನಲ್ಲಿ ಬಹಳಷ್ಟು ಸತ್ಯವಿದೆ. ಆದರೆ ಪಶ್ಚಿಮದ ದೇಶಗಳಲ್ಲಿ

ಕುಟುಂಬದ ಮಹತ್ವದ ಬಗ್ಗೆ ಈಗ ಹೆಚ್ಚು ತಿಳಿವಳಿಕೆ ಮೂಡು ತ್ತಿದೆ. ವೃದ್ಧರನ್ನು ಕುಟುಂಬದಲ್ಲಿಯೇ ಇಟ್ಟು ಸಾಕಬೇಕು ಎಂದು ಅಲ್ಲಿಯ ಜನರು ತಿಳಿದುಕೊಳ್ಳುತ್ತಿದ್ದಾರೆ. ಪಶ್ಚಿಮದ ದೇಶಗಳು ಮಾಡಿದ ತಪ್ಪನ್ನು ಭಾರತ ಮತ್ತು ಉಳಿದ ಅಭಿ ವೃದ್ಧಿಶೀಲ ದೇಶಗಳು ಮಾಡಬಾರದು. ನಮ್ಮ ಕುಟುಂಬಗಳು ಹಾಳಾಗಬಾರದು. ಅವುಗಳಲ್ಲಿ ವೃದ್ಧರು ಸುಖವಾಗಿ ಇರು ವಂತೆ ನೋಡಿಕೊಳ್ಳಬೇಕು. ಈ ಬಗ್ಗೆ ನಮ್ಮ ಜನರು ಸರಿ ಯಾಗಿ ತಿಳಿದುಕೊಂಡಿರಬೇಕು.

ವೃದ್ಧರು ಯಾರೂ ಹೊರಲಾರದ ಹೊರೆ ಎಂದು ದೂರುವುದು ತಪ್ಪು. ಅವರು ಈಗ ಎಪ್ಪತ್ತು ಎಂಬತ್ತು ವರ್ಷ ಗಳ ವರೆಗೆ ಮನೆಯ ಒಳಗೆ ಮತ್ತು ಮನೆಯ ಹೊರಗೆ ದುಡಿದು ಕುಟುಂಬಕ್ಕೆ ಸಹಾಯ ಮಾಡಬಲ್ಲರು. ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳು ಹೇಳಿರುವಂತೆ ಅವರಿಗೆ ದುಡಿಯಲು ಅವ ಕಾಶ ಕೊಡುವುದು ಅವರ ಸಮಸ್ಯೆಗೆ ಸರಿಯಾದ ಮದ್ದು. ವೃದ್ಧರಿಗೆ ಬಹಳ ಕಠಿಣ ಪರಿಶ್ರಮದ ಕೆಲಸಗಳನ್ನು ಕೊಡು ವುದು ಬೇಡ. ಆದರೆ ಅವರನ್ನು ಕೆಲಸದಿಂದ ದೂರ ಇಡು ವುದು ಬೇಡ. ತಾವು ದುಡಿಯುತ್ತಿದ್ದೇವೆ, ಕುಟುಂಬಕ್ಕೆ ಭಾರ ವಾಗಿಲ್ಲ ಎಂಬ ಭಾವನೆ ಬಂದರೆ ಅವರು ಹೆಚ್ಚು ಸುಖಿಗಳಾಗು ತ್ತಾರೆ.

ವೃದ್ಧರು ಹಲವು ರೀತಿಗಳಲ್ಲಿ ನಮ್ಮ ಸಮಾಜಕ್ಕೆ ಉಪ ಕಾರ ಮಾಡಬಲ್ಲರು. ಕವಿಗಳು, ಕಲಾವಿದರು, ಬರಹಗಾರರು ಮುಪ್ಪಾದಂತೆ ಹೆಚ್ಚು ಸಮರ್ಥರಾಗುತ್ತಾರೆ ಎಂಬುದು ಎಲ್ಲ

ರಿಗೂ ಗೊತ್ತಿರುವ ವಿಷಯ. ಗಾಯಕರು, ಶಿಲ್ಪಿಗಳು, ವಿಜ್ಞಾನಿಗಳು ಕೂಡಾ ಮುಪ್ಪಾದಂತೆ ಹೆಚ್ಚು ಸಮರ್ಥರಾಗುತ್ತಾರೆ. ಕುಶಲ ಕೈಗಾರಿಕೆಗಳಲ್ಲಿ ತೊಡಗಿರುವ ಕೆಲಸಗಾರರು ಅನುಭವ ಪಡೆದಂತೆ ಒಳ್ಳೆಯ ಕೆಲಸಗಾರರಾಗುತ್ತಾರೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳೋಣ.

ಏಷ್ಯಾ ಮತ್ತು ಆಫ್ರಿಕಾ ಖಂಡದ ದೇಶಗಳಲ್ಲಿ ಈಗಲೂ ಕೂಡಾ ಎಷ್ಟೋ ಬಡಕುಟುಂಬಗಳಲ್ಲಿ ಮಕ್ಕಳಿಗೆ ಶಾಲಾ ಶಿಕ್ಷಣ ಸಿಗುವುದಿಲ್ಲ. ಮಕ್ಕಳು ತಮ್ಮ ತಂದೆ–ತಾಯಿ ಅಥವಾ ಅಜ್ಜ-ಅಜ್ಜಿಯರಿಂದ ತಮಗೆ ಬೇಕಾದ ವಿದ್ಯೆಯನ್ನೂ ಕಸುಬುಗಳನ್ನೂ ಕಲಿತುಕೊಳ್ಳುತ್ತಾರೆ. ಈ ವೃದ್ಧರ ಮಕ್ಕಳನ್ನು ತಿದ್ದಿ ರೂಪಿಸುತ್ತಾರೆ. ಈಗಲೂ ವೃದ್ಧರು ಈ ಕೆಲಸವನ್ನು ಮಾಡಬಹುದು. ಇದೆಲ್ಲಕ್ಕಿಂತ ಹೆಚ್ಚಾಗಿ ಇವರು ತಮ್ಮ ದೀರ್ಘ ಜೀವನದ ಅನುಭವಗಳಿಂದ ಕಲಿತ ಪಾಠವನ್ನು ನಮಗೆ ಕಲಿಸಬಲ್ಲರು. ಇದು ಶಾಲೆಗಳಲ್ಲಿ ಕಲಿಯುವ ಪಾಠಕ್ಕಿಂತ ಹೆಚ್ಚು ಬೆಲೆ ಬಾಳುವಂಥದು. ಇಂಥ ಅನುಭವವು ವ್ಯರ್ಥ ಹಾಳಾಗಿ ಹೋಗಲು ಬಿಡಬಾರದು.

ವೃದ್ಧರಿಗೂ ಕೆಲವು ಕಿವಿ ಮಾತುಗಳನ್ನು ಹೇಳುವುದು ಉಚಿತವಾದೀತು. ಅವರು ಬದಲಾಗುತ್ತಿರುವ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವುದನ್ನು ಕಲಿಯಬೇಕು. ಹಿಂದಿನಂತೆ ತಂದೆ ತಾಯಿಗಳು ತಮ್ಮ ಮಾತೇ ನಡೆಯಲಿ ಎಂದು ಹಟ ಮಾಡಬಾರದು. ತಂದೆಯ ಸರ್ವಾಧಿಕಾರ ಇರುವ ಕುಟುಂಬಗಳು ಈಗ ಹಳೆಯ ಮಾತಾಗಿದೆ. ಕಿರಿಯರು ಈಗ ತಮಗೂ ಸ್ಥಾನ

ಮಾನ ಬೇಕೆಂದು ಕೇಳಿಕೊಳ್ಳುತ್ತಿದ್ದಾರೆ. ಅದನ್ನು ನಯವಾಗಿ ಒಪ್ಪಿಕೊಂಡು ಬಿಟ್ಟರೆ ಒಣ ಜಗಳಗಳು ಹುಟ್ಟುವುದಿಲ್ಲ.

ವೃದ್ಧರು ಗೊಣಗುತ್ತ ಕೂಡುವುದನ್ನು ಬಿಡಬೇಕು. ಅವರು ಗೊಣಗುವುದರಿಂದ ಜಗತ್ತು ಸುಧಾರಿಸುವುದಿಲ್ಲ. ಈ ವಯಸ್ಸಿನಲ್ಲಿ ಕುಟುಂಬದ ಕೆಲಸದಲ್ಲಿ ಹೆಚ್ಚು ಭಾಗವಹಿಸಬೇಕು. ಆದರೆ ಕಿರಿಯರ ಕೆಲಸದಲ್ಲಿ ಸುಮ್ಮನೆ ಮಧ್ಯ ಪ್ರವೇಶಿಸ ಬಾರದು.

ಮನೆಯಲ್ಲಿ ಊಟ ಸಿಗುತ್ತದೆ ಎಂದು ಸುಮ್ಮನೆ ಕೂಡುವುದು ತಪ್ಪು. ದೇಹಕ್ಕೆ ಸತತ ಕೆಲಸ ಕೊಡುತ್ತಿರಬೇಕು. ಕಾಯಿಪಲ್ಲೆ ಬೆಳೆಸುವುದು, ವಠಾರ ಶುಚಿಯಾಗಿ ಇಡುವುದು, ಮನೆಯ ಚಿಕ್ಕಪುಟ್ಟ ಕೆಲಸ ಮಾಡುವುದು ಇವೆಲ್ಲ ಒಳ್ಳೆಯದು. ಊಟ ತಿಂಡಿಗಳಿಗೆ ಮಿತಿ ಹಾಕಿಕೊಂಡಿರಬೇಕು. ಹೊತ್ತು ಹೊತ್ತಿಗೆ ಸರಿಯಾಗಿ ಉಣ್ಣಬೇಕು. ಜೀರ್ಣ ಮಾಡಿಕೊಳ್ಳಬಹುದಾದ ಆಹಾರಗಳನ್ನೇ ಸೇವಿಸಬೇಕು.

ಮುಪ್ಪು ನಮ್ಮನ್ನು ಆವರಿಸಿಕೊಳ್ಳುತ್ತಿರುವಾಗ ನಮ್ಮ ದೇಹವು ಕಾಹಿಲೆಗಳ ತವರೂರು ಆಗಬಹುದು ಎಂದು ಗೊತ್ತಿರಲಿ. ಮೇಲಿಂದ ಮೇಲೆ ಆರೋಗ್ಯದ ತಪಾಸಣೆ ಮಾಡಿಕೊಳ್ಳುವುದು ಒಳ್ಳೆಯದು. ಪಶ್ಚಿಮದ ದೇಶಗಳಲ್ಲಿ ಇರುವಂತೆ ನಮ್ಮಲ್ಲಿ ಸುಸಜ್ಜಿತವಾದ ದವಾಖಾನೆಗಳು ಇರಲಿಕ್ಕಿಲ್ಲ. ಪ್ರಾಥಮಿಕ ಆರೋಗ್ಯ ಕೇಂದ್ರವಾದರೂ ಸರಿ, ವೈದ್ಯರನ್ನು ಕಾಣಬೇಕು. ಮುಂದೆ ಬರಬಹುದಾದ ಕಾಹಿಲೆಗಳಿಗೆ ಮುಂಜಾ-

ಗ್ರತೆ ವಹಿಸಿದರೆ ವೃದ್ಧರಿಗೂ ಕ್ಷೇಮ, ಕುಟುಂಬದ ಇತರರಿಗೂ ಕ್ಷೇಮ. ಮುದುಕರ ಆರೈಕೆ ಮಾಡುವುದು ಉಳಿದವರಿಗೆ ಎಷ್ಟು ಕಷ್ಟದ ಕೆಲಸ ಎಂಬುದು ನೆನಪಿರಲಿ.

ಸರಕಾರಗಳು ಏನು ಮಾಡಬೇಕು ಎಂಬುದನ್ನು ನೋಡೋಣ. ವೃದ್ಧರಿಗೆ ಇನ್ನಷ್ಟು ವೃದ್ಧಾಪ್ಯ ವೇತನ ಕೊಟ್ಟರೆ ಸಮಸ್ಯೆಗಳು ಬಗೆಹರಿಯುವುದಿಲ್ಲ. ಅಥವಾ ಇನ್ನಷ್ಟು ವಸತಿಗೃಹಗಳನ್ನು ಕಟ್ಟಿದರೆ ಸಮಸ್ಯೆ ಪರಿಹಾರವಾಗುವುದಿಲ್ಲ. ಈ ಸವಲತ್ತುಗಳು ಬೇಡವೆಂದು ನಾವು ಹೇಳುವುದಿಲ್ಲ. ಅವು ಖಂಡಿತವಾಗಿಯೂ ಬೇಕು. ಹಾಗೆ ನೋಡಿದರೆ ನಮ್ಮ ರಾಜ್ಯದಲ್ಲಿ ಕೊಡುವ ವೃದ್ಧಾಪ್ಯ ವೇತನ ಏನೂ ಸಾಲದು. ಕನಿಷ್ಠ ನೂರು ರೂಪಾಯಿ ಸಿಗುವಂತಾಗಬೇಕು. ಅದೇ ರೀತಿಯಲ್ಲಿ ಕುಟುಂಬದ ಆಶ್ರಯ ಸಿಗದ ಜನರಿಗೆ ಪ್ರತಿ ತಾಲೂಕಿನಲ್ಲಿ ವೃದ್ಧಾಶ್ರಮಗಳು ಬೇಕು. ಹಳ್ಳಿಗಳಲ್ಲಿ ಮುದುಕರು ಔಷಧ ಸೇವಿಸುವುದು ತಪ್ಪು, ಇನ್ನು ಇರುವ ಕೆಲವು ದಿನ ಅವರು ದೇವರ ಹೆಸರು ಹೇಳುತ್ತ ಕುಳಿತುಕೊಳ್ಳಲಿ ಎನ್ನುವ ಮೂಢರಿದ್ದಾರೆ.' ಇದು ತಪ್ಪು. ಮುದುಕರಿಗೂ ಬದುಕುವ ಹಕ್ಕು ಇದೆ. ಅವರು ಪ್ರಾಥಮಿಕ ಕೇಂದ್ರಗಳಲ್ಲಿ ಹಾಗೂ ದೊಡ್ಡ ಆಸ್ಪತ್ರೆಗಳಲ್ಲಿ ಔಷಧ ಉಪಚಾರ ಪಡೆಯುವಂಥ ಏರ್ಪಾಟು ಮಾಡಬೇಕು. ಕೆಲವು ದೇಶಗಳಲ್ಲಿ ವೃದ್ಧರು ಇರುವ ಕುಟುಂಬಗಳಿಗೆ ಹೋಗಿ ಅವರ ಆರೋಗ್ಯ ವಿಚಾರಿಸುವ ಆರೋಗ್ಯ ಸಹಾಯಕರನ್ನು ನೇಮಕಮಾಡಿದ್ದಾರೆ. ನಾವು ಇಂಥ ಉಪಕ್ರಮ ಪ್ರಾರಂಭಿಸಬಹುದು.

ಆದರೆ ಇದೆಲ್ಲಕ್ಕಿಂತ ಮುಖ್ಯವೆಂದರೆ ವೃದ್ಧರು ಮೈ ಕೈ ಗಟ್ಟಿ ಇರುವತನಕ ಕೆಲಸಮಾಡಲು ಅವಕಾಶಕೊಡಬೇಕು.

ಸರಕಾರದ ನೌಕರಿಯಿಂದ ನಿವೃತ್ತಿ ಹೊಂದಿದರೂ ಬೇರೆ ಯೋಗ್ಯ ಕೆಲಸದಲ್ಲಿ ತೊಡಗಿಕೊಳ್ಳಲು ಅವಕಾಶಬೇಕು. ಪೂರ್ಣಾವಧಿ ಕೆಲಸ ಕೊಡದಿದ್ದರೆ ಹೋಗಲಿ, ಅರ್ಧಾವಧಿ ಕೆಲಸ ಕೊಡಬಹುದು. ಇದರಿಂದ ವೃದ್ಧರು ತಾವು ಗಳಿಸುತ್ತಿದ್ದೇವೆ. ತಾವು ನಿರುಪಯೋಗಿ ಆಗಿಲ್ಲ ಎಂಬ ಉತ್ಸಾಹ ಬರುತ್ತದೆ. ಅವರು ಹೀಗೆ ದುಡಿಯುವುದರಿಂದ ದೇಶದ ಆದಾಯವೂ ಹೆಚ್ಚುತ್ತದೆ.

ನಾವು ಈಗ ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲಿನಲ್ಲಿ ಇದ್ದೇವೆ. ಕುಟುಂಬಗಳೂ, ಸರಕಾರಗಳೂ ವೃದ್ಧರ ಸಮಸ್ಯೆಗಳನ್ನು ಚೆನ್ನಾಗಿ ತಿಳಿದುಕೊಳ್ಳಲಿ. ಹಾಗೆ ಮಾಡಿದರೆ ಹೆದರಿಕೊಳ್ಳುವ ಕಾರಣವಿಲ್ಲ. ವೃದ್ಧರಿಗೆ ನಾಳೆ ಎಂಬುದು ಉಂಟು.

———

## ಉಪಯುಕ್ತ ಓದು


1. Bhatia, H. S. Aging and Society (1983)
2. Burgess, E. W. (Ed) : Aging in Western Societies (1960)
3. DeSouza, Alfred (Ed) : The Social Organization of Aging Among the Urban Poor (1982)
4. Marulasiddaiah, H. M. : Old People of Makunti (1969)
5. Merton, R. K. : Contemporary Social Problems (1981)
6. Tibbits, Clark (Ed) : Handbook of Social Gerontology (1960)
7. **'Social Welfare'**, Vol, 29, No. 1, April, 82
8. 'ಸುಧಾ' 26 ಸೆಪ್ಟೆಂಬರ್, 1982 (ವೃದ್ಧಾಪ್ಯ ವೇತನ)

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

೧. ಸ್ತ್ರೀ ನಡೆದು ಬಂದ ದಾರಿ

—ಸರೋಜಿನಿ ಬಿ. ಶಿಂತ್ರಿ

೨. ಹರಿಜನೋದ್ಧಾರ ಕಾರ್ಯ

—ಎನ್. ಕೆ. ಕಡೆತೋಟದ

೩. ಕಾರ್ಮಿಕರ ಸಮಸ್ಯೆಗಳು

—ಎಸ್. ಜಿ. ಕರಭಂಟನಾಳ

೪. ಭಾರತದಲ್ಲಿ ಕುಟುಂಬ ಯೋಜನೆಯ ಯಶಸ್ಸು

—ಬಿ. ಎಸ್. ನಂದ್ಯಾಳ

೫. ಮದುವೆ ಮತ್ತು ಮಹಿಳೆ

—ನೀಲಮ್ಮ ಕತ್ನಳ್ಳಿ

೬. ಅಪರಾಧಿಗಳು ಹಾಗೂ ಅವರ ಸುಧಾರಣೆ

—ಎಸ್. ಎಫ್. ಪೂಜಾರ

೭. ಶಿರಾಲಿಯ ಗೊಂಡರು

—ನಾರಾಯಣ ಯಾಜಿ

೮. ಪ್ರೌಢರ ಜಗತ್ತಿನಲ್ಲಿ ಮಕ್ಕಳು

—ಕೆ. ಜಿ. ಗುರುಮೂರ್ತಿ

೯. ಬದಲಾಗುತ್ತಿರುವ ಭಾರತೀಯ ಗ್ರಾಮ

—ಎಚ್. ವ್ಹಿ. ನಾಗೇಶ್

೧೦. ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ

—ಎನ್. ಕೆ. ಕಡೆತೋಟದ

ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ